# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

ರಿ.ನಂ. ಕೆ.ಆರ್.ಎನ್. ಸಂಪುಟ : 1 ಸಂಚಿಕೆ : 4 ಮೇ 15 ರಿಂದ 31–1997 ಪುಟಗಳು : 24 ರೂ. 5

ರಾಷ್ಟ್ರಮಟ್ಟದ ಮಿಮಿಕ್ರಿಯಲ್ಲಿ ಮಿಂಚಿದ ಕು|| ಗೀತಾ ಮೋಂಟಡ್ಕ (ಮೇಲಿನ ಚಿತ್ರ)

ಹದಿಹರೆಯದ ಪ್ರೇಮಿಗಳ ಸಂಭಾಷಣೆ ಏನಿರಬಹುದು ? (ಕೆಳಗಿನ ಚಿತ್ರ)

# ಕೊಡಗು ಸಂಗಾತಿ

ನಮ್ಮ ಜನಾಂಗದ ಹೆಮ್ಮೆಯ ಪತ್ರಿಕೆ

ಚಿರಾಯುವಾಗಿ ಮುಂದುವರಿಯಲಿ....



ಇಂದ :

ಮುಕ್ಕಾಟಿ ಕರುಂಬಯ್ಯ ರಾಮಪ್ಪ,
ಮಾಜಿ ಸೈನಿಕರು ಮತ್ತು ಪ್ಲಾಂಟರ್

ಇವರ ಸವಿನೆನಪಿಗಾಗಿ

ಪತ್ನಿ ದಿವಂಗತ ಕೈಬೀಲಿರ ಮುತ್ತಣ್ಣ ಪುಷ್ಪ
ಸ್ಟಾಪ್ ನರ್ಸ್, ಕೃಷ್ಣರಾಜೇಂದ್ರ ಆಸ್ಪತ್ರೆ, ಮೈಸೂರು.

ಸದಾ ನಿನ್ನ ಚಿರಸ್ಮರಣೆಯಲ್ಲಿರುವೆ



ವಿಳಾಸ : 614, 8 ನೇ ಮೇನ್, ಮೊದಲನೆ ಹಂತ,
ವಿಜಯನಗರ, ಮೈಸೂರು–560017.

**ಕೊಡಗು ಸಂಗಾತಿ**

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ಓ. ರಮೇಶ್**

ಪ್ರಸಾರ ವ್ಯವಸ್ಥಾಪಕ :
**ಪಟ್ಟಡ ಎಲ್. ಶಿವಕುಮಾರ್**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**

ಮುದ್ರಣ :
**ಎಂ.ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
ವಿನಾಯಕನಗರ, ಮೈಸೂರು-12

ಗೌರವ ವ್ಯವಸ್ಥಾಪಕ :
**ಪಟ್ಟಡ ಎಂ. ಪ್ರಭಾಕರ್**

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 322, ಬೋಗಾದಿ ಸರ್ಕಲ್,
ಹಿನಕಲ್ ಪೋಸ್ಟ್, ಮೈಸೂರು–17

## ಒಳನೋಟ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :-

ನಮ್ಮಲ್ಲಿ ಇಂದು ಕಡುಬಡವರ ಸಂಖ್ಯೆ ಅತಿಯಾಗಿದೆ. ಇವರ ಏಳಿಗೆಗೆ ನಮ್ಮ ಜನಾಂಗದ ಪರವಾಗಿ ಯಾವುದೇ ಅರ್ಥಿಕ ಪರ್ಯಾಯ ವ್ಯವಸ್ಥೆಗಳಿಲ್ಲ. ಯುವ ಪೀಳಿಗೆಯ, ಸ್ವಯಂ ಉದ್ಯೋಗ ಸ್ಥಾಪನೆಗೆ ಅತೀ ಶೀಘ್ರದ, ಸುಲಭ ರೂಪದಲ್ಲಿ ಹಣದ ವ್ಯವಸ್ಥೆಯಾದಾಗ ಪ್ರಗತಿಯು ಅತೀ ವೇಗದಲ್ಲಿ ಸಾಗಬಲ್ಲದು.

ನಮ್ಮೆಲ್ಲರ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲದ ಇಂದಿನ ಪರಿಸರದಲ್ಲಿ ಬಡವರಿಗೆ ಧನ ಸಹಾಯ ಮಾಡುವಂತಹ ಸುಲಭ ರೀತಿಯ, ಹೆಚ್ಚಿನ ನಿರ್ಬಂಧವಿಲ್ಲದ ಆರ್ಥಿಕ ನೆರವು ನೀಡುವ ಒಂದು ಹಣ ಹಣಕಾಸಿನ ಸಂಸ್ಥೆಯ ಅವಶ್ಯಕತೆ ಇಂದು ಅನಿವಾರ್ಯ ವಾಗಿದೆ. ಅದಕ್ಕಾಗಿ ಗೌಡ ಫೈನಾನ್ಸ್, ಗೌಡ ಬ್ಯಾಂಕ್ ಗೌಡಸಹಕಾರ ಬ್ಯಾಂಕ್, ಕೊಡಗು ಗೌಡ ಮಾಜಿಸೈನಿಕರ ಸಹಕಾರ ಬ್ಯಾಂಕ್ ಇತ್ಯಾದಿ ಇತ್ಯಾದಿ ಹೆಸರಿನಿಂದ ಕರೆಯಲ್ಪಡಲಿ. ಹಣಕ್ಕಾಗಿ ಪ್ರತಿ ಸದಸ್ಯನಿಂದ ಕನಿಷ್ಟ 1000 ರೂ. ಗಳನ್ನು ದೇಣಿಗೆ ಪಡೆದು ಸುಸೂತ್ರವಾಗಿ ನಡೆಸಬಹುದಲ್ಲವೆ ? ನಿರುದ್ಯೋಗಿ ನಮ್ಮ ಸಮಾಜ ಬಾಂಧವರ ಆರ್ಥಿಕ ಸ್ಥಿತಿ ಸುಧಾರಿಸಲು ಆಶಾದೀಪ ವಾಗಬಲ್ಲದು.

ಆಸಕ್ತರು ಹುಟ್ಟಿಹಾಕಿ, ಪ್ರತಿನಿಧಿಗಳನ್ನು ನೇಮಿಸಿ, ಗ್ರಾಮ ಮಟ್ಟದಿಂದ ಸದಸ್ಯರನ್ನು ಒಗ್ಗೂಡಿಸಿ, ಪ್ರತಿಫಲ ವನ್ನು ಸಂಬಂಧಪಟ್ಟವರಿಗೆ ತಲುಪುವಂತೆ ಮಾಡಿದಾಗ, ಅದರಿಂದ ಏಳಿಗೆಗೊಂಡ ಪ್ರತಿವ್ಯಕ್ತಿಯು ಒಂದು ಸಮಾಜದ ಬಲಿಷ್ಠ, ದೃಢ ಪ್ರಜೆಯಾಗಬಲ್ಲ. ಹೀಗೆ ಹಂತ ಹತಂದಲ್ಲಿ ಒಬ್ಬೊಬ್ಬ ವ್ಯಕ್ತಿಯು ಬೆಳೆದಾಗ ಸಮಾಜ ಬಲಿಷ್ಠಗೊಳ್ಳುವುದರಲ್ಲಿ ಯಾವುದೇ ಸಂಶಯ ವಿಲ್ಲ.

## ಕೈಗಡಿಯಾರ ಕ್ಷೇತ್ರದ ದೈತ್ಯ

ದೇಶದ ಕೈಗಡಿಯಾರ ಕ್ಷೇತ್ರದಲ್ಲಿ ಟೈಟನ್ ಈಗ ತನ್ನ ಹೆಸರನ್ನು ಗಟ್ಟಿಗೊಳಿಸಿಕೊಂಡಿದೆ. ಸದ್ಯದ ಮಟ್ಟಿಗೆ ಅದು ಈಗ ದೇಶದ ಕೈಗಡಿಯಾರ ಕ್ಷೇತ್ರದ ಅಗ್ರಗಣ್ಯ ಸಂಸ್ಥೆ. ಪ್ರತಿಸ್ಪರ್ಧಿಗಳು ಟೈಟನ್‌ಗಿಂತ ಸಾಕಷ್ಟು ಹಿಂದಿವೆ.

ದೇಶದ ಪ್ರತಿಯೊಬ್ಬರ ಕೈಯನ್ನು ಅಲಂಕರಿಸಬೇಕು ಎಂಬುದು ಟೈಟನ್‌ನ ಕನಸು. ಅದು ಮಾತ್ರವಲ್ಲದೆ ವಿದೇಶಿಯರ ಕರಗಳಲ್ಲೂ ರಾರಾಜಿಸಬೇಕು ಎಂಬುದೂ ಅದರ ಬಯಕೆ ಈ ಕನಸು ಸಂಪೂರ್ಣ ನನಸಾಗುವುದು ಕಷ್ಟವಾದರೂ ಆ ನಿಟ್ಟಿನಲ್ಲಿ ಅದು ಕಾರ್ಯಪ್ರವೃತ್ತ ಆಗಿರುವುದಂತೂ ನಿಜ.

ಟೈಟಾನ್ ವಾಚಸ್, ಟಾಟಾ ಗುಂಪಿಗೆ ಸೇರಿದ ಸಂಸ್ಥೆ ಎಂಬುದು ಗಮನಾರ್ಹ.

ಎಲ್ಲ ಬಗೆಯ ಜನರ ಅಭಿರುಚಿ ಹಾಗೂ ಎಲ್ಲ ವರ್ಗದ ಜನರ ಆರ್ಥಿಕ ಸಾಮರ್ಥ್ಯಕ್ಕೆ ಸೂಕ್ತವಾದಂಥ ಕೈಗಡಿಯಾರ ಗಳನ್ನು ಟೈಟನ್ ಹೊಂದಿದೆ. 600 ರೂ. ನಿಂದ ಅರಂಭಿಸಿ ಆಭರಣಯುಕ್ತ ಕೈಗಡಿಯಾರಗಳವರೆಗೆ ಅದರ ವ್ಯಾಪ್ತಿ ಹೊಂದಿದೆ.

ವಾರ್ಷಿಕ 40 ಲಕ್ಷ ಉತ್ಪಾದನೆ ಸಾಮರ್ಥ್ಯವನ್ನು ಟೈಟನ್ ಹೊಂದಿದೆ. 97ರಲ್ಲಿ 50 ಲಕ್ಷ ಕೈಗಡಿಯಾರಗಳಿಗೆ ಹೆಚ್ಚಿಸಲು ಅದು ಉದ್ದೇಶಿಸಿದೆ. ಇದರ ಜೊತೆಗೆ, ಗ್ರಾಹಕರಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮದ ಅಂಗವಾಗಿ ಟೈಟನ್ ಬೋಟಿಕ್‌ಗಳನ್ನು ಅದು ಆರಂಭಿಸಿದೆ.

ಮಾರುಕಟ್ಟೆಯಲ್ಲಿ ತನ್ನ ಪಾಲನ್ನು ಉತ್ತಮಪಡಿಸಿಕೊಳ್ಳುವ ನಿಟ್ಟಿನಲ್ಲಿ ಇದೊಂದು ಒಳ್ಳೆಯ ತಂತ್ರ. ಆರ್ಥಿಕ ಉದಾರೀಕರಣದ ಈ ದಿನಗಳಲ್ಲಿ ಪ್ರತಿಯೊಂದು ಕುಟುಂಬಕ್ಕೆ 2 ರಿಂದ 3 ವಾಚ್‌ಗಳನ್ನಾದರೂ ಕೊಳ್ಳುವ ಸಾಮರ್ಥ್ಯ ಇದ್ದೇ ಇದೆ. ಜೊತೆಗೆ ಉಳ್ಳವರು ಒಂದಕ್ಕಿಂತ ಹೆಚ್ಚಿನ ಸಂಖ್ಯೆಯ ವಾಚ್‌ಗಳನ್ನು ಖರೀದಿಸುತ್ತಾರೆ. ಅದರೆ ಇದನ್ನು ಸಾಧ್ಯವಾಗಿಸಲು ಸ್ವಲ್ಪ ಮಟ್ಟಿನ ಶ್ರಮಅಗತ್ಯ. ಟೈಟನ್ ಆ ನಿಟ್ಟಿನಲ್ಲಿ ಪ್ರಯತ್ನವಂತೂ ನಡೆಸಿದೆ.

ತಾಂತ್ರಿಕ ಪರಿಣತಿ ಹಾಗೂ ಉತ್ತಮ ಮಾರುಕಟ್ಟೆ ತಂತ್ರದ ಫಲವಾಗಿ ಟೈಟನ್ ಕಂಪನಿಯು ಇದುವರೆಗೆ ಸ್ಥಳೀಯ ಮಟ್ಟದಲ್ಲಿ ಅಂಥ ಭಾರಿ ಸ್ಪರ್ಧೆಯನ್ನೇನೂ ಎದುರಿಸುತ್ತಿಲ್ಲ. ಅದರೆ ಪ್ರಮುಖ ವಿದೇಶಿ ವಾಚ್ ಕಂಪನಿಗಳು ಈಗ ಭಾರತಕ್ಕೂ ಅಡಿ ಇಟ್ಟಿದ್ದು ಅವುಗಳ ಸ್ಪರ್ಧೆಯನ್ನಂತೂ ಎದುರಿಸಬೇಕು. ಈ ದೃಷ್ಟಿಯಿಂದ, ಮುಂಬರುವ ವರ್ಷಗಳಲ್ಲಿ ತನ್ನ ಮಾರುಕಟ್ಟೆಉಳಿಸಿಕೊಳ್ಳುವುದು ಟೈಟನ್‌ಗೆ ಸುಲಭವಲ್ಲ.

# ಕರ್ನಾಟಕದ ಏಕೈಕ ಮಹಿಳಾ ಮಿಮಿಕ್ರಿ ಹುಡುಗಿ

## ಬಹುಮುಖ ಯುವಪ್ರತಿಭೆಯ ಕು|| ಗೀತಾ ಮೋಂಟಡ್ಕ

● ಪರಿಚಯ : **ಪಟ್ಟಡ ಪ್ರಭಾಕರ್**

**ಪಶ್ಚಿಮ** ಘಟ್ಟದ, ಕಡಲ ತೀರದ ಭಾರ್ಗವ ನಾಡೆಂದು, ಪುರಾಣ ಪ್ರಸಿದ್ಧವಾದ ಮಲೆನಾಡು ಪ್ರದೇಶದ, ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು, ಅರೆಭಾಷಿಕಾ ಗೌಡ ಜನಾಂಗದವರ ಹೆಮ್ಮೆಯ ತವರೂರು. ಇಲ್ಲಿ ಅರಳಿದ ಪ್ರತಿಭೆಗಳಲ್ಲಿ ಗೀತಾ ಮೋಂಟಡ್ಕ ಒಬ್ಬಳು. ಅವಳ ಹೆಸರನ್ನು ಕೇಳದವರೇ ವಿರಳವೆಂದರೆ ಅತಿಶಯೋಕ್ತಿಯಾಗಲಾರದು. ಮೋಂಟಡ್ಕ ನಾಟಕ ರಂಗಕ್ಕೆ ಅರೆಭಾಷಿಕ ಜನಾಂಗ ನೀಡಿದ ಉಜ್ವಲ ಮತ್ತು ಅಪೂರ್ವ ಪ್ರತಿಭೆಯು ಸಹ ಹೌದಾಗಿದೆ.

ಬಿಗುಮಾನವಿಲ್ಲದ, ಧೈರ್ಯದ ನೇರ ದಿಟ್ಟ ನಡೆಯ ಹರಳು ಹುರಿದಂತೆ, ಮನ ಮುಟ್ಟುವ ರೀತಿಯಲ್ಲಿ ಮಾತನಾಡುವ ಈ ಪ್ರತಿಭೆ ಹುಟ್ಟಿದ್ದು ಸಿರಿವಂತಿಕೆಯಲ್ಲದ ಶೇಷಪ್ಪಗೌಡರ 3 ಗಂಡು, 3 ಹೆಣ್ಣು ಮಕ್ಕಳಲ್ಲಿ 5 ನೇಯವಳಾಗಿ. ಇವಳು ಅಣ್ಣ, ತಮ್ಮ, ಅಕ್ಕಂದಿಯರ ಒಡನಾಡಿನಲ್ಲಿ ಬಾಲ್ಯವನ್ನು ಕಳೆದಳು. ಅಕ್ಕ ರತ್ನಾವತಿಯ ಅಕ್ಕರೆಯ ಸಹಕಾರ ಅಷ್ಟಿಷ್ಟಲ್ಲ. ಸಾಕಾರ ಮೂರ್ತಿಯ, ತಾಳ್ಮೆ, ಸ್ಥೈರಣೆಯು, ಎಲ್ಲಾ ಕಷ್ಟಗಳಿಂದ. ಪಟ್ಟ ಪಾಡುಗಳು, ಅಷ್ಟಿಷ್ಟಲ್ಲದೆ ಇವೆಲ್ಲವನ್ನು ಎದುರಿಸಿ ಧೈರ್ಯ ನೀಡಿದ ಹೆತ್ತ ತಾಯಿಯೇ ವೆಂಕಮ್ಮನವರು. ಅವರನ್ನು ಪ್ರತೀ ಮಾತಿನಲ್ಲೂ ನೆನಪಿಸಿಕೊಳ್ಳುತ್ತಾಳೆ ಇವಳು. ಬಾಲ್ಯದಲ್ಲಿ ಗೀತಾ ಬಹಳ ಕಷ್ಟಪಟ್ಟು, ಓದಿದ ಹುಡುಗಿ. ಈಕೆಯ ತಂದೆ ಗಾಂಧೀವಾದಿಯಾಗಿ, ಸುಳ್ಯದ "ಮಗ್ಗದ ಮಾಸ್ತರ್" ಎಂದೇ ಪ್ರಸಿದ್ಧವಾಗಿರುವ ಶ್ರೀ ಶೇಷಪ್ಪಗೌಡರು ಪರೋಪಕಾರವೇ ತನ್ನ ಜೀವನದ ಮುಖ್ಯ ಗುರಿ ಎಂದು ತಿಳಿದ ವ್ಯಕ್ತಿ.

ಬಡಕುಟುಂಬದಲ್ಲಿ ಹುಟ್ಟಿ ಮಾತಿನ ತುಂಬಾ ತನ್ನ ಆತ್ಮಕತೆ, ತನ್ನ ತಂದೆಯ ಅವಿಭಕ್ತಕುಟುಂಬ ಒಡೆದು ಪಾಲಾಗಿದ್ದು,



**ಕು|| ಗೀತಾ ಮೋಂಟಡ್ಕ**

ಇವಳ ತಂದೆಗೆ ಬಡತನ ಬಳುವಳಿಯಾಗಿ ಬಂದಿದ್ದು, ತಾನು ಆ ಕುಟುಂಬದ ಕೊನೆಯ ಮಗಳಾಗಿ ಹುಟ್ಟಿ ಮನೆಯ ಸಂಕಷ್ಟವನ್ನೆಲ್ಲಾ ಮರೆಯಲು ಸದಾ ಮನೆ ಕೆಲಸ ಮಾಡುತ್ತಾ ಕಾಲ ಕಳೆದಿರುವುದನ್ನು ನೆನಪಿಸುತ್ತಾಳೆ. ನೋಡಲು ಸ್ವಲ್ಪ ಸಿನಿಮಾ ನಟಿ ಸ್ಮಿತಾ ಪಾಟೀಲಳಂತೆ ಕಾಣುವ ಗೀತಾ ತನ್ನಕುಟುಂಬದ ನೋವು ನಲಿವುಗಳನ್ನು ಮರೆಯಲು ಮೊರೆ ಹೊಕ್ಕಿದ್ದು ಏಕಾಂತಕ್ಕೆ. ಈಕೆಯ ಮಾತು ಕತೆಗಳೆಲ್ಲ ನಿಸರ್ಗದ ಪಕ್ಷಿ ಪ್ರಾಣಿಗಳೊಂದಿಗೆ. ತಂದೆ ಸುಳ್ಯದ ಶಾಲೆಯೊಂದರಲ್ಲಿ ಮಗ್ಗದ ಮಾಸ್ತರಾಗಿ ತಂದು ಹಾಕುತ್ತಿದ್ದ ಸಂಬಳದಲ್ಲೇ ಇಡೀ ಕುಟುಂಬ ಬದುಕು ಸಾಗಿಸಬೇಕಾಗಿತ್ತು.

ಗೀತಾಗೆ ಹಿರಿಯರ ನೋವನ್ನು ಕಡಿಮೆ ಮಾಡುವುದು ಸಾಧ್ಯವಿರಲಿಲ್ಲ. ಆ ನೋವು ಕೇವಲ ಹಣದ ಕೊರತೆಯಿಂದ ಬಂದದ್ದಲ್ಲ. ಸ್ವಾಭಿಮಾನವನ್ನು ಎತ್ತಿ ಹಿಡಿದ ನೋವು. ಹಳೆಯ ವೈಭವದ ಬದುಕನ್ನು ಕಳೆದುಕೊಂಡ ನೋವು ಅದು. ಅವಿಭಕ್ತ ಕುಟುಂಬ ಪಾಲಾದಾಗ ಬರುವ ನೋವನ್ನು ಕಾಲವೇ ತೀರಿಸಬೇಕು. ಗೀತಾ ಸ್ವಾಭಿಮಾನದ ಹುಡುಗಿ. ಮಾತನಾಡಿದರೆ ಯಾವಮಾತಿನಿಂದ ಆತ್ಮ ಗೌರವಕ್ಕೆ ಧಕ್ಕೆ ಬಂದಿತೋ ಎನ್ನುವ ಹುಡುಗಿ. ಮನೆ ಕೆಲಸವೆಲ್ಲವನ್ನೂ ಅದೆಷ್ಟೇ ಒತ್ತಡವಿದ್ದರೂ, ಮಾಡುತ್ತಾ ತನ್ನನ್ನು ತಾನು ಮರೆಯುತ್ತಿದ್ದಳು. ತನ್ನ ಮನೆಯ ಹಸುವನ್ನು ಅಟ್ಟಿಕೊಂಡು ಸುಳ್ಯದ ಮೇವಿನ ಪರಂಬಿಗೆ ಹೋಗುತ್ತಿದ್ದಳು. ಸಂಜೆ ತನಕ ಆ ನಿಸರ್ಗದೊಳಗೆ ತನ್ನನ್ನು ತಾನೇ ಕರಗಿಸಿಕೊಂಡು ಬಿಡುವ ಗೀತಾಗೆ ಆಗ ಹತ್ತೋ ಹನ್ನೆರಡೋ ವಯಸ್ಸಿರಬಹುದು.

ತನ್ನ ನೋವುಗಳನ್ನು ಹಂಚಿಕೊಳ್ಳಲಿಕ್ಕೆ ಆಕೆಗೆ ಇದ್ದ ಕೇಳುಗರೆಂದರೆ ಮೂಕ ಪ್ರಾಣಿಗಳು. ಅವುಗಳೊಂದಿಗೆ ಮಾತನಾಡುತ್ತಾ, ಮಾತನಾಡುತ್ತಾ ಈ ಹುಡುಗಿಗೆ ಅವುಗಳ ಮಾತೇ ಬಂದು ಬಿಟ್ಟಿತು. ಮೊದಲು ಗೀತಾ 'ಮಿಮಿಕ್ರಿ' ಕಲಿತದ್ದೇ ಹೀಗೆ. ಅದೊಂದು ವಿದ್ಯೆ ಎಂದು ಗುರುವಿನ ಬಳಿ ಹೋಗಿ ಕಲ್ತಿದ್ದಲ್ಲ. ಈಕೆ ನಾಯಿಯಂತೆ ಬೊಗಳಿ ಧ್ವನಿ ಕ್ರಿಯೆ ಉಂಟು ಮಾಡಿದಾಗ ನಾಯಿಗಳು ಪ್ರತಿಕ್ರಿಯೆ ತೋರಿದವು. ಬೆಕ್ಕುಗಳು ಓಡಿ ಹೋಗುತ್ತಿದ್ದವು ಮತ್ತು ಬರುತ್ತಿದ್ದವು.

ಹಾಗಾದರೆ ಈಕೆ ಅನುಕರಿಸುತ್ತಿರುವುದು ಸರಿಯಾಗಿ ಇತ್ತು. ಪ್ರಾಣಿಗಳ ಧ್ವನಿಯನ್ನು ಹೀಗೆ ಅನುಕರಿಸುತ್ತಾ ಹೋಗುವುದು ಗೀತಾಳ ಸ್ವಭಾವಕ್ಕೆ ಒಗ್ಗಿ ಹೋಯಿತು. ಅದು ಬೀದಿ ಎಂದು ನೋಡಲಿಲ್ಲ, ಮನೆಯೆಂದು ನೋಡಲಿಲ್ಲ. ಸಿಕ್ಕ ಪ್ರಾಣಿಯ ಎದುರು ಅವರದೇ ಆದ ಧ್ವನಿಯನ್ನು ಅನುಕರಿಸುತ್ತಾ ಹೋದಾಗ ಆ ಪ್ರಾಣಿ ಪ್ರತಿಕ್ರಿಯೆ ತೋರುತ್ತಾ ಹೋದಂತೆ, ಇವಳಿಗೆ ತನ್ನ ಕಲೆಗಾರಿಕೆಯ ಬಗ್ಗೆ ಹೆಚ್ಚಿನ ವಿಶ್ವಾಸ ಮೂಡಲು ಕಾರಣವಾಯಿತು.

ಸುಳ್ಯದಲ್ಲಿ ಪಿ.ಯು.ಸಿ. ಓದುವ ಹೊತ್ತಿಗೆ ಗೀತಾ ತನ್ನ ಪರಿಸರದ ಮತ್ತು ಕರ್ನಾಟಕದ ಏಕೈಕ ಪ್ರಥಮ ಮಹಿಳಾ ಮಿಮಿಕ್ರಿ ಪಟುವಾಗಿಬಿಟ್ಟಳು. ಇಂದು ಸಹ ಇವಳೊಬ್ಬಳೇ ಕರ್ನಾಟಕದ ಏಕೈಕ ಮಹಿಳಾ ಮಿಮಿಕ್ರಿ ಪಟು ಎಂದರೆ ತಪ್ಪಾಗಲಾರದು.

ಹೆಣ್ಣು ಮಕ್ಕಳಲ್ಲಿ ಪ್ರತಿಭೆ ಸಾಕಷ್ಟಿದ್ದರು, ಈ ಮಿಮಿಕ್ರಿಯನ್ನು ಆಯ್ಕೆ ಮಾಡಿ ಈ ತನಕ ಯಾರು ಮುಂದೆ ಬಂದಿಲ್ಲ. ಹೆಣ್ಣು ಮಕ್ಕಳಂತೂ ವಿರಳವೆನ್ನಲೇಬೇಕು ಕಾರಣ ಇದಕ್ಕೆ ತಾಕತ್ತು, ದಮ್ಮು ಬೇಕು ಕೆಲವೊಮ್ಮೆ ಅಸಡ್ಡೆ, ತಾತ್ಸಾರ, ಯಾವುದು ಸಲ್ಲ. **ಯಾವುದು ಸಾಧ್ಯವಿಲ್ಲವೋ ಅದನ್ನೇ ಸಾಧಿಸಿ, ಕೀರ್ತಿಗಳಿಸಿದಳು.** ಇವನ್ನ ಗಳಿಸಲು ಪಟ್ಟಪಾಡು, ನೋವು ನಲಿವು ಎಷ್ಟು ವರ್ಣಿಸಿದರು ಸಾಲದು. ಧೈರ್ಯ, ಸ್ಥೈರ್ಯ, ತ್ಯಾಗ ತನ್ನ ಕಾಲ ಮೇಲೆ ನಿಲ್ಲುವ ಛಲ, ಗುರುಗಳಿಲ್ಲದೆ ತನ್ನ ಸ್ವಂತಿಕೆಯಿಂದ ಮೆಟ್ಟಿಲೇರಿದ ಮೇಲೆ ಶಹಭಾಷ್ ಅನ್ನುವ ಜನರಿದ್ದರು ಸಹ, ಯಾರ ಸಹಕಾರವು ಇದಕ್ಕೆಂದೇ ಬೆನ್ನು ತಟ್ಟಿ ಸಿಕ್ಕಲಿಲ್ಲ ಅನ್ನುವ ಕೊರಗಿದೆ ಇವಳಿಗೆ. ನನ್ನಂತೆ ನನ್ನ ಶ್ರಮದಲ್ಲಿ ಪಾಲುಗಾರರಾಗಿ 10, 12 ಯುವತಿಯರು ಮುಂದೆ ಬಂದಾಗ ಮಾತ್ರ ನನ್ನ ಶ್ರಮ ಸಾರ್ಥಕ ಅನ್ನುತ್ತಾಳೆ ಗೀತಾ. ಅಂದು ಆಕೆಯ ಪ್ರತಿಭೆಯನ್ನು ಅರಿಯದೆ ಮೂಗು ಮುರಿಯುತ್ತಿದವರು ಇಂದು ಈಕೆ ಧ್ವನಿವರ್ಧಕದ ಮುಂದೆ ಬಂದು ಕಾರ್ಯಕ್ರಮ ನಿರೂಪಿಸಿದಾಗ ಮೂಕಸ್ಮಿತರಾಗುತ್ತಾರೆ. ಆದರೂ ಈಕೆ ಹೆಣ್ಣು. ಹುಡುಗರ ಸಮನಾಗಿ ನಿಂತು ಗಂಡುಬೀರಿಯಂತೆ ವರ್ತಿಸುವುದೆಂದರೇನು ? ಕೀರ್ತಿಯನ್ನು ಹೊಟ್ಟೆಕಿಚ್ಚಿನಿಂದ ಅಳೆಯುವುದಾದರೆ, ಗೀತಾಳ ಪ್ರತಿಭೆಯನ್ನು ಆ ಹದಿನಾರನೆಯ ವಯಸ್ಸಿನಲ್ಲೇ ಗಳಿಸಿ, ಸುತ್ತ ಮುತ್ತಲಲ್ಲಿ ಅಪಾರ ಕೀರ್ತಿವಂತೆಯಾಗಿದ್ದಳು. ಈಕೆಯ ದಿಟ್ಟತನಕ್ಕೆ ಗಂಡು ಬೀರಿತನದ ಪಟ್ಟ ಕಟ್ಟಿದವರು ಅಂದು.

ಆದರೆ ಇವಳ ಮನೆಯ ಜನ ಅಪಕೀರ್ತಿಗೆ ಬೆದರಲಿಲ್ಲ. ಅಪ್ಪ, ಅಮ್ಮ, ಅಕ್ಕ, ಅಣ್ಣ ಗೀತಾಗೆ ಸಂಪೂರ್ಣ ಸಹಕಾರ ಕೊಟ್ಟರು. ಅಣ್ಣ ತನ್ನ ತಂಗಿಯನ್ನು ತಾನಾಡುವ ನಾಟಕಗಳಲ್ಲಿ ಪಾತ್ರ ನಿರ್ವಹಿಸಲು ಕರೆದುಕೊಂಡು ಹೋಗುತ್ತಿದ್ದನು. 30 ಬಗೆಯ ಪ್ರಾಣಿಗಳ ಧ್ವನಿಯನ್ನು ಆಗಲೇ ಕಂಠಕರಗತ ಮಾಡಿಕೊಂಡಿದ್ದ ಗೀತಾ ಪಂಜಾಬ್, ಮುಂಬೈ, ದೆಹಲಿ, ಮದ್ರಾಸ್, ಬೆಂಗಳೂರು ಮುಂತಾದ ಹಲವು ಸ್ಥಳಗಲ್ಲಿ ಕಾರ್ಯಕ್ರಮ ಕೊಟ್ಟು 500 ಕ್ಕೂ ಹೆಚ್ಚು ಬಹುಮಾನವನ್ನು ಪಡೆಯಲು ಆಕೆಯ ಅಣ್ಣ, ಅಕ್ಕಂದಿರ ಅಂದಿನ ಈ ಸಹಕಾರವೇ ಕಾರಣವೆನ್ನಬಹುದು.

ಪದವೀಧರೆಯಾದ ಗೀತಾ, ಸುಳ್ಯದ ಕೆ.ವಿ.ಜಿ. ಸಂಸ್ಥೆಯಲ್ಲಿ ಮೊದಲ ನೌಕರಳಾಗಿ 400 ರೂ. ಸಂಭಾವನೆಯೊಂದಿಗೆ ಸೇರಿದ ಇವಳು ಇಂದು ತನ್ನ ಪರಿಶ್ರಮದಿಂದ ಈಗ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ಸ್ನಾತಕೋತ್ತರ ಪದವಿ ಮತ್ತು ಡಿಪ್ಲೋಮ ಇನ್ ಜರ್ನಲಿಸಂ ಆಗಿದ್ದಾಳೆ. ಇವಳಿಗೆ ಕನ್ನಡ ಮತ್ತು ಇಂಗ್ಲೀಷ್ ಟೈಪಿಂಗ್‌ನಲ್ಲೂ ಸಾಕಷ್ಟು ಪರಿಣತಿಯಿದೆ. ಅಂದು ಸುಳ್ಯದ ರಬ್ಬರ್ ಇಲಾಖೆಯಲ್ಲಿ ಸಹಾಯಕಿಯಾಗಿ ಸುಳ್ಯದ ತಾಂತ್ರಿಕ ವಿದ್ಯಾಲಯದಲ್ಲಿ ಬೆರಳಚ್ಚುಗಾರ್ತಿಯಾಗಿ, ನಂತರ ರಾಜ್ಯ ಸರ್ಕಾರದ ತೂಕ ಮತ್ತು ಅಳತೆ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕಿಯಾಗಿ ಈಗ ಕರ್ನಾಟಕ ಸರ್ಕಾರದ "ನಾಟಕ ಕರ್ನಾಟಕ" ರಂಗಾಯಣದಲ್ಲಿ ಅತ್ಯುತ್ತಮ ಕಲಾವಿದೆ.

ಮಡಿಕೇರಿಯ ತೂಕ ಮತ್ತು ಅಳತೆ ಇಲಾಖೆಯಲ್ಲಿರುವಾಗಲೇ ರಂಗಾಯಣವು ಸರ್ಕಾರದ ಅಧಿಪತ್ಯದಲ್ಲಿದ್ದರೂ ಸಹ ಟ್ರೈನಿಂಗ್ ಮತ್ತು ಸರ್ಕಾರಿ ಕೆಲಸವನ್ನು ಕೊಡುವ ಬರವಸೆ ಇತ್ತಿದ್ದರಿಂದಲೇ, ಆ ಇಲಾಖೆಯಲ್ಲಿ ಮೊದಲ ದರ್ಜೆ ಸಹಾಯಕಿ ಆಗಿದ್ದರೂ ಸಹ ತನ್ನ ಈ ಕಲೆಯನ್ನು ರಾಷ್ಟ್ರಮಟ್ಟದಲ್ಲಿ ಬೆಳೆಸಿ ಪೋಷಿಸಬೇಕೆನ್ನುವ ಛಲದಿಂದ ಸೇರಿದ ಪ್ರತಿಭಾಶಾಲಿಯೀ ಈ ಗೌಡ ಕುವರಿ.

ಗೀತಾ ಇಲ್ಲಿ ಸಾಕಷ್ಟು ಕಲಿತಳು. ಅವಳ ಮಿಮಿಕ್ರಿ ಅನುಕರಣೆಯಿಂದ ರಂಗಾಯಣದ ನಾಟಕಗಳು ಕಳೆಯೇರಿದವು. ಆದರೆ ಗೀತಾ ಬಯಸಿದ್ದೆಲ್ಲ ಇನ್ನೂ ಕೈಗೂಡಿಲ್ಲ. ಮಿಮಿಕ್ರಿಯನ್ನು ಒಂದು ಸ್ವತಂತ್ರ ಕಲೆ ಎಂದು ಗುರುತಿಸುವುದು, ಆ ಕಲೆಯನ್ನು ಹೆಚ್ಚು ಸಮರ್ಥವಾಗಿ ಬಳಸಿಕೊಳ್ಳುವುದು ಯಾರಿಗೂ ಸಾಧ್ಯವಾಗಿಲ್ಲ ಈಕೆಯ ಮಿಮಿಕ್ರಿಯು ಒಂದು ಅದ್ಭುತ ಲೋಕ. ಇದು ಕೇವಲ ಮನರಂಜನೆಯ ವಸ್ತುವಾಗಿ ಬಡಬಹುದು ಎಂಬ ಅಂಜಿಕೆ ಗೀತಾಳನ್ನು ಕಾಡುತ್ತಿದೆ. ಅದೊಂದು ಕೌಶಲ್ಯವೆಂದೂ ಅದರಲ್ಲಿ ಕಲೆಗಾರಿಕೆ ಎನಿಲ್ಲವೆಂದು ಎಲ್ಲರೂ ಭಾವಿಸುತ್ತಿದ್ದಾರೇನೋ ಎಂಬ ಶಂಕೆ ಇವಳಿಗಿದೆ.

(ಮುಂದಿನ ಸಂಚಿಕೆಗೆ)

# ಕೆಳದಿ ನಾಯಕ - ಚೌಡಪ್ಪ ಗೌಡ

ಗೌಡ ಜನಾಂಗದ ಹುಟ್ಟು, ಗೌಡರ ಹಿನ್ನೆಲೆ, ಗೌಡ ಸಂಸ್ಕೃತಿ, ಜನಜೀವನ ಹಾಗೂ ವೈಶಿಷ್ಟ್ಯಗಳ ಕೂಲಂಕುಶ ಪರಿಚಯ ಮಾಡಿಕೊಳ್ಳುವ ಕುತೂಹಲ ವುಂಟಾಗಿರುವುದು ನಿಜವಾಗಿಯೂ ಬೆಳವಣಿಗೆಯ ಸಂಕೇತ. ಈ ದಿಸೆಯಲ್ಲಿ ಗೌಡರ ಬಗ್ಗೆ ಪುರಾಣ ಹಾಗೂ ಚರಿತ್ರೆಯ ಪುಟಗಳು ಸಾಕಷ್ಟು ತೆರೆದುಕೊಂಡಿವೆ. ಅಲ್ಲಲ್ಲಿ ಕೆಲವು ಗೌಡರ ಉಲ್ಲೇಖನಗಳು ಕಾಣಸಿಗುತ್ತವೆ. ಹೀಗೆ ಚರಿತ್ರಾಪುಟಗಳಲ್ಲೇ ಅಡಗಿರುವ ಗೌಡರು ಯಾರು ? ಈ ಜನಾಂಗಕ್ಕೆ ಅವರ ಸಂಬಂಧವಿದೆಯೇ ? ಆ ಕಾಲದಲ್ಲಿ ಗೌಡರು ಸಾಧಿಸಿದ ಮಹಾತ್ಕಾರ್ಯಗಳೇನು ? ಅಂತಹ ಸಾಧನೆಗಳ ತುಣುಕ ಸಂಕೇತವೇನಾದರೂ ಇಂದಿನ ನಮ್ಮ ಜನಾಂಗಕ್ಕೆ ಹರಿದು ಬಂದಿದೆಯೇ ? ಹೀಗೆ ನೂರಾರು ವಿಚಾರಗಳ ಬಗ್ಗೆ ಜಿಜ್ಞಾಸೆ ಮೂಡುವುದು ಸಹಜ.

ಊರಿನ ನಾಯಕನಾಗಿ ಮೆರೆದು, ತನ್ನ ವಿಜಯದಲ್ಲಿ ಅಚಲ ವಿಶ್ವಾಸ, ಸಾಮರ್ಥ್ಯ ಮನೆತನದ ಹಿರಿಮೆ ಹಾಗೂ ಗೌಡ ನಾಯಕತ್ವವನ್ನು ನಿರ್ವಹಿಸಿದ ಚೌಡಪ್ಪಗೌಡನ ಬಗ್ಗೆನಮ್ಮ ಜನಾಂಗಕ್ಕೆ ಇಂದು ಪರಿಚಯ ಮಾಡಿಸಿಕೊಟ್ಟು ಇನ್ನಷ್ಟು ವಿವರ ತಿಳಿದುಕೊಳ್ಳುವ ಆಸಕ್ತಿಯನ್ನು ಎಲ್ಲರಲ್ಲಿ ಮೂಡಿಸುವುದು ಉಚಿತವು ಹೌದು.

ಚೌಡಪ್ಪಗೌಡ ಆಳಿದ ಕಾಲ ಕ್ರಿ. ಶ. 1498-1514. ಭದ್ರೇಗೌಡ ಈತನ ಸಹೋದರ, ಕೆಳದಿ ಸಮೀಪ ಪಳ್ಳಿಬಯಲು ಗ್ರಾಮದ ಬಸಪ್ಪಗೌಡ ಇವರ ತಂದೆ. ವ್ಯವಸಾಯ ಇವರ ಮುಖ್ಯ ಕಸುಬಾಗಿತ್ತು. ಚೌಡಪ್ಪಗೌಡ ಗ್ರಾಮಾಧಿಪತಿ ಆಗಿ ಕೆಳದಿ ಸಂಸ್ಥಾನವನ್ನಾಳುವ ನಾಯಕ ಮನೆತನವನ್ನು ಸ್ಥಾಪಿಸಿದ ಈತ ಮತ್ತು ಸಹೋದರ ಕಷ್ಟಪಟ್ಟು ಶ್ರದ್ಧೆಯಿಂದ ದುಡಿದು ಶ್ರೀಮಂತರಾದರು. ಧರ್ಮನಿಷ್ಠೆಗೆ ಹೆಸರಾದ ಇವರಿಗೆ ಸುತ್ತಲಿನ ಜನ ಅಭಿಮಾನಿಗಳಾಗಿದ್ದರು ಚೌಡಪ್ಪ ಗೌಡರು ಕೆಳದಿಯ ನಾಯಕ ಹೇಗೆ ಆದ ಎಂಬ ಬಗ್ಗೆ ಕೆಲವು ಕತೆಗಳೂ ಇವೆ.

ಚೌಡಪ್ಪಗೌಡ ತನ್ನ ಜಮೀನಿನಲ್ಲಿ ಕೆಲಸ ಮಾಡುವ ಸಂದರ್ಭದಲ್ಲಿ ಅಪೂರ್ವ ಖಡ್ಗವೊಂದು ಸಿಕ್ಕಿದ್ದು, ಅದು 'ನಾಗಮುರಿ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಮುಂದೆ ಶತ್ರು ಸಂಹಾರಕ್ಕೆ ಅದೇ ಖಡ್ಗ ಆತನಿಗೆ ಸಹಾಯಕಾರಿಯಾಯಿತು. ಚೌಡಪ್ಪನ ಹಸು ಒಂದು ಹುತ್ತದ ಮೇಲೆ ಹಾಲು ಸುರಿಸುತ್ತಿತ್ತು. ಇದನ್ನು ತಿಳಿದ ಆತ ಆಶ್ಚರ್ಯದಿಂದ ಹುತ್ತವನ್ನಗೆದಾಗ ಅಲ್ಲೊಂದು ಲಿಂಗ ದೊರಕಿತು. ಅಂದಿನ ರಾತ್ರಿ ಗೌಡರಿಗೆ ಕನಸಿನಲ್ಲಿ ಆ ಲಿಂಗವು 'ರಾಮೇಶ್ವರ ಲಿಂಗ'ವೆಂತಲೂ, ಆ ಸ್ಥಳದಲ್ಲಿ ದೇವಸ್ಥಾನ ಸ್ಥಾಪಿಸಬೇಕೆಂದೂ, ಆಗ ತನಗೆ ರಾಜ್ಯ ಪ್ರಾಪ್ತಿಯಾಗುವುದೆಂದೂ ನುಡಿ ಕೇಳಿಸಿತು. ಚೌಡಪ್ಪನವರು ಅದರಂತೆಯೆ ನಡೆದು, ಅಲ್ಲಿ ದೇವಸ್ಥಾನ ಕಟ್ಟಿಸಿ, ಅದು ತನ್ನ ಮನೆದೇವರೆಂದು ಪೂಜಿಸತೊಡಗಿದನು.

ಒಮ್ಮೆ ಚೌಡಪ್ಪಗೌಡ ತನ್ನ ಜಮೀನಿನಲ್ಲಿ ಕೆಲಸ ಮಾಡಿ ವಿಶ್ರಾಂತಿ ಪಡೆಯುತ್ತಿದ್ದಾಗ ಇವನ ಮೇಲೆ ಬಿಸಿಲು ಬೀಳದಂತೆ ಸರ್ಪವೊಂದು ಹೆಡೆಯಾಡಿಸುತ್ತಿತ್ತು. ಇದನ್ನು ಕಂಡ ವೆಂಕಟಾದ್ರಿ ಜೋಯಿಸರು ಚೌಡಪ್ಪನಿಗೆ ಹೊನ್ನರಾಶಿ ಹಾಗೂ ರಾಜ್ಯ ಪ್ರಾಪ್ತಿಯಾಗುವುದೆಂದು ಭವಿಷ್ಯ ನುಡಿದಿದ್ದರು. ಮುಂದೆ ಗೌಡರಿಗೆ ದೊರೆತ ನಿಧಿಯನ್ನು ಉಪಯೋಗಿಸಿ ಸೈನ್ಯ ಕಟ್ಟಿ ಸುತ್ತಮುತ್ತಲಿನ ಪಾಳೆಯಗಾರರನ್ನು ಸೋಲಿಸಿ ರಾಜ್ಯ ಸ್ಥಾಪಿಸಿ ಕೆಳದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಜನತೆಯ ನೆಮ್ಮದಿ ಬದುಕಿಗೆ ಗ್ರಾಮಾಧಿಪತಿಯಾಗಿ ಕಾರಣನಾದ. ತನ್ನ ಈ ಕೀರ್ತಿಯನ್ನು ಸಹಿಸದ ಅಸೂಯೆಗಾರರು ವಿಜಯನಗರದ ಅರಸನಿಗೆ ಕೊಟ್ಟ ದೂರಿನ ಮೇರೆಗೆ ಚೌಡಪ್ಪನ ಬಂಧನವಾಯಿತು. ಆಗ ಚೌಡಪ್ಪನು ತನ್ನ ಸಹೋದರ ಭದ್ರಪ್ಪನೊಂದಿಗೆ ವಿಜಯನಗರಕ್ಕೆ ಹೋಗಬೇಕಾಯಿತು. ಆದರೆ ಈ ಸಹೋದರರ ನಿಷ್ಕಪಟ ಹಾಗೂ ನಿಸ್ಪೃಹತೆಯ ಮನೋಭಾವ ಕಂಡ ಅರಸ ಖುಷಿ ಪಟ್ಟು ಶಿಕ್ಷಿಸುವ ಬದಲು ಅವರನ್ನು ಗೌರವಿಸಿದ. ಮಾತ್ರವಲ್ಲದೆ ಬಲಿಹಾಳು ಪ್ರಾಂತ್ಯದ ಬಂಡುಕೋರರನ್ನು ಸದೆ ಬಡಿಯಲು ಅರಸನಿಗೆ ಈ ಸಹೋದರರಿಂದ ಬಹಳ ಅನುಕೂಲವೇ ಆಯಿತು. ಇದಕ್ಕಾಗಿ ವಿಜಯನಗರದ ಅರಸ ಚೌಡಪ್ಪಗೌಡನಿಗೆ ಕೆಳದಿ, ಇಕ್ಕೇರಿ, ಚಂದ್ರಗುತ್ತಿ, ಪರ್ಬಯಲು, ಎಲಗಳಲೆ, ಮೇದೂರು, ಕಲಿಸೆ ಮತ್ತು ಲಾತವಾಡಿ ಎಂಬ ಎಂಟು ಗ್ರಾಮಗಳನ್ನು ಕೊಟ್ಟು "ಚೌಡಪ್ಪ ನಾಯಕ" ಎಂಬ ಬಿರುದನ್ನು ನೀಡಿ ವಿಜಯನಗರದ ಸಾಮಂತನಾಗಿ ರಾಜ್ಯವಾಳುವಂತೆ ನಿಯಮಿಸಿದ ಎಂದು ತಿಳಿದು ಬರುತ್ತದೆ.

ಮುಂದೆ ಚೌಡಪ್ಪಗೌಡ (ನಾಯಕ) ಇಕ್ಕೇರಿಯಲ್ಲಿ ಒಂದು ಅರಮನೆ ಹಾಗೂ ಕೋಟೆ ಕಟ್ಟಿಸಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.. ಸದಾಶಿವ ಮತ್ತು ಭದ್ರಪ್ಪ ಎಂಬ ಎರಡು ಗಂಡು ಮಕ್ಕಳನ್ನು ಹೊಂದಿದ. ಚೌಡಪ್ಪಗೌಡ ಕ್ರಿ.ಶ. 1514ರಲ್ಲಿ ಮರಣ ಹೊಂದಿದನು. ಸದಾಶಿವ ಮುಂದೆ ಕೆಳದಿಯ ನಾಯಕನಾದ ಎಂದು ತಿಳಿದುಬರುತ್ತದೆ.

ಚರಿತ್ರೆಯ ಕಾಲದಲ್ಲೇ 'ಗೌಡ' ರಾಜ್ಯಭಾರ ಮಾಡಿ ಪ್ರಜೆಗಳ ಪ್ರೀತಿ ಪಾತ್ರನಾಗಿ, ಧೀರನೆನಿಸಿಕೊಂಡಿರುವ ವಿಚಾರವನ್ನು ಇಲ್ಲಿ ಸ್ಮರಿಸಲಾಗಿದೆ. ಈ ಬಗ್ಗೆ ಇನ್ನಷ್ಟು ಅಧ್ಯಯನ ನಡೆಸುವಂತಾದರೆ 'ಗೌಡರ' ಪೂರ್ವ ಇತಿಹಾಸ ತಿಳಿಯಲು ಅನುಕೂಲವಾಗಬಹುದು.

● **ಪದ್ಮ ಕಾರ್ಕಳ, ಕುತ್ಯಾಳ.**

# ಜನಪ್ರಿಯವಾಗುತ್ತಿರುವ ಸೌರಶಕ್ತಿ

ಕರ್ನಾಟಕದಲ್ಲಿ ಸೌರಶಕ್ತಿಯಿಂದ ನೀರು ಕಾಯಿಸುವ ವಿಧಾನ ನಿಧಾನವಾಗಿ ಜನಪ್ರಿಯವಾಗುತ್ತಿದೆ. ಇದಕ್ಕಾಗಿ ಹೇಳದೆ ಕೇಳದೆ ನಾಪತ್ತೆಯಾಗುವ ವಿದ್ಯುಚ್ಛಕ್ತಿ ಮತ್ತು ಎಲ್ಲಾ ಕ್ಷೇತ್ರಗಳಲ್ಲಿ ಏರುತ್ತಿರುವ ಬೆಲೆಗಳಿಗೆ ಧನ್ಯವಾದ ಹೇಳಬಹುದು. ಸ್ಥೂಲ ಸಮೀಕ್ಷೆಯೊಂದರ ಪ್ರಕಾರ ಕರ್ನಾಟಕದಲ್ಲೇ ಇಂತಹ ಸುಮಾರು 5 ಸಾವಿರ ಸೌರಶಕ್ತಿಯಿಂದ ನೀರು ಕಾಯಿಸುವ ಹೀಟರ್‌ಗಳನ್ನು ಸ್ಥಾಪಿಸಲಾಗಿದೆ.

1993ರವರೆಗೆ ಎಷ್ಟು ಹೀಟರ್‌ಗಳನ್ನು ಸ್ಥಾಪಿಸಲಾಗಿದೆ ಎಂದು ನಿಖರವಾಗಿ ಹೇಳಬಹುದು. ಕಾರಣ ಎಲ್ಲಾ ಖರೀದಿದಾರರಿಗೆ ಸರ್ಕಾರ ಇದಕ್ಕಾಗಿ ಸಹಾಯಧನ ನೀಡುತ್ತಿತ್ತು ಎಂದು ಕರ್ನಾಟಕ ರಿನ್ಯೂವಬಲ್ ಎನರ್ಜಿ ಡೆವಲಪ್‌ಮೆಂಟ್ ಕಾರ್ಪೊರೇಷನ್ ತಾಂತ್ರಿಕ ಅಧಿಕಾರಿ ಶ್ರೀನಾಥ್ ಹೇಳಿದ್ದಾರೆ.

ಸರ್ಕಾರೇತರ ಸಂಸ್ಥೆಗಳು, ರಾಜ್ಯದ ರಾಜಧಾನಿಯಲ್ಲಿ ಸುಮಾರು 30 ಸೌರಶಕ್ತಿಯ ಈ ಸಾಧನದ ತಯಾರಕರಿದ್ದಾರೆ. ಮೈಸೂರು ಮತ್ತು ಇತರ ನಗರಗಳಲ್ಲಿ ಈ ತಯಾರಕರು ತಲೆ ಎತ್ತುತ್ತಿದ್ದಾರೆ. ಬೆಂಗಳೂರಿನ ನಂತರ ಮೈಸೂರು, ಮಂಗಳೂರು ಮತ್ತು ಹುಬ್ಬಳ್ಳಿಯಲ್ಲಿ ಸೌರಶಕ್ತಿಯಿಂದ ನೀರು ಕಾಯಿಸುವ ಹೀಟರ್ ಜನಪ್ರಿಯಗೊಳ್ಳುತ್ತಿವೆ.

ಈ ಸೌರಶಕ್ತಿ ಹೀಟರ್‌ಗಳನ್ನು ಜನಪ್ರಿಯಗೊಳಿಸುವಲ್ಲಿ ಸಾಧಿಸಿರುವ ಪ್ರಗತಿ ಬಗ್ಗೆ ಅತೃಪ್ತಿಯನ್ನೇ ಹೊಂದಿರುವ ಶ್ರೀನಾಥ್ ಇದಕ್ಕೆ ಮಾರುಕಟ್ಟೆಯ ಸ್ಥಿತಿಯಷ್ಟೇ ಅಲ್ಲ ತಿಂಗಳಿಗೆ 10 ರಿಂದ 12 ರಷ್ಟು ಈ ಸಾಧನ ತಯಾರಿಸುವ ಸಾಮರ್ಥ್ಯ ಹೊಂದಿರುವ ತಯಾರಕರೆಲ್ಲಾ ಸಣ್ಣ ಪ್ರಮಾಣದ ಕ್ಷೇತ್ರದಲ್ಲಿ ಇರುವುದು ಕಾರಣವಾಗಿದೆ. ಯಾವುದೇ ಶ್ರಮವಿಲ್ಲದೆ ಈ ಉತ್ಪಾದನೆಗೆ ತಕ್ಕಂತಹ ಆದೇಶಗಳು ಸಿಗುವುದರಿಂದ ತಯಾರಕರು ಮಾರುಕಟ್ಟೆಯನ್ನೇನು ಅವಲಂಭಿಸಿಲ್ಲ ಎನ್ನುತ್ತಾರೆ.

ಇದರಿಂದಾಗಿ ಈ ವಿಧಾನದ ಬಗ್ಗೆ ಅರಿವುಂಟು ಮಾಡಲು ಭಾರಿ ಪ್ರಮಾಣದಲ್ಲಿನ ಜಾಹೀರಾತು ಪ್ರಚಾರ ಕೈಗೊಳ್ಳಲು ಕಾರ್ಪೊರೇಷನ್ ನಿರ್ಧರಿಸಿದೆ ಎಂದು ಶ್ರೀನಾಥ್ ತಿಳಿಸಿದರು.

ಸೌರಶಕ್ತಿಯಿಂದ ನೀರು ಕಾಯಿಸುವ ಈ ಸಾಧನ ಗುಣಮಟ್ಟ ಉತ್ತಮವಾಗಿದ್ದು, ಅದನ್ನು ಅವಲಂಭಿಸಬಹುದಾಗಿದೆ. ಜೊತೆಗೆ ಇದರಲ್ಲಿ ಬಹುಪಾಲು ಐಎಸ್‌ಐ ಚಿಹ್ನೆಯನ್ನು ಪಡೆದಂತಹದ್ದಾಗಿದೆ. ಉಳಿದವುಗಳು ಇದನ್ನು ಪಡೆದುಕೊಳ್ಳುವ ನಿಟ್ಟಿನಲ್ಲಿವೆ ಎಂದಿದ್ದಾರೆ.

ಬಿಸಿನೀರಿನ ಬಳಕೆ ಹೆಚ್ಚಾಗಿರುವ ಕೈಗಾರಿಕೆಗಳು, ಆಸ್ಪತ್ರೆ, ಹೋಟೆಲ್‌ಗಳು ಮತ್ತು ಹಾಸ್ಟೆಲ್‌ಗಳಲ್ಲಿ ಈ ಸೌರಶಕ್ತಿ ವಿಧಾನದ ಬಳಕೆಯನ್ನು ಮಾಡಿಕೊಳ್ಳುತ್ತಿದ್ದಾರೆ. ಆದರೆ ಮನೆಗಳಲ್ಲಿ ಇದರ ಬಳಕೆ ಈಗಲೂ ಅತ್ಯಂತ್ಯ ಕಡಿಮೆ ಸಂಖ್ಯೆಯಲ್ಲಿದೆ.

ಪ್ರತಿದಿನ 100 ಲೀಟರ್ ಬಿಸಿನೀರು ಒದಗಿಸುವ ಸೌರಶಕ್ತಿಯಿಂದ ನೀರು ಕಾಯಿಸುವ ಅತ್ಯಂತ ಸಣ್ಣ ಸಾಧನದ ಅಳವಡಿಕೆಯಿಂದ ಪ್ರತಿವರ್ಷ 1000 ಯೂನಿಟ್ಸ್ ವಿದ್ಯುತ್ ಉಳಿಸಬಹುದು ಪ್ರಸ್ತುತ ಇರುವ ವಿದ್ಯುತ್ ಬೆಲೆಗೆ ಹೋಲಿಸಿದರೆ 2500 ರೂ. ಉಳಿತಾಯವಾಗುತ್ತದೆ. ಇದನ್ನು ಲೆಕ್ಕಾಚಾರ ಹಾಕಿದರೆ ಐದು ವರ್ಷದೊಳಗೆ ಸೌರಶಕ್ತಿ ವಿಧಾನ ಅಳವಡಿಕೆಗೆ ಆರಂಭದಲ್ಲಿ ಹೂಡುವ ಹಣ ಸಿಕ್ಕಿಂತಾಗುತ್ತದೆ ಎಂದು ಬೆಂಗಳೂರು ಮೂಲದ ಸರ್ಕಾರೇತರ ಸಂಸ್ಥೆ ಇಂಟರ್ ನ್ಯಾಷನಲ್ ಎನರ್ಜಿ ಇನ್‌ಷಿಯೇಟೀವ್ (ಐಇಐ) ಲೆಕ್ಕಾಚಾರ ಹಾಕಿದೆ.

ಮಳೆಗಾಲದಲ್ಲಿಯೂ ಈ ಸೌರಶಕ್ತಿಯಿಂದ ನೀರುಕಾಯಿಸುವ ಹೀಟರ್‌ಗಳಲ್ಲಿ ಅಳವಡಿಸಿರುವ ಪರ್ಯಾಯ ವ್ಯವಸ್ಥೆಯಿಂದ (ಎಲೆಕ್ಟ್ರಿಕ್ ಬ್ಯಾಕ್ ಅಪ್ ಹೀಟರ್) ವಿದ್ಯುತ್‌ನಿಂದ ನೀರು ಕಾಯಿಸಬಹುದಾಗಿದೆ. ಅದೂ ಸೌರಶಕ್ತಿಯಿಂದ ಸಾಕಷ್ಟು ಪ್ರಮಾಣದಲ್ಲಿ ನೀರು ಕಾಯದಿದ್ದಾಗ ಇದರ ಉಪಯೋಗವಷ್ಟೆ.

ದಿನಕ್ಕೆ 100 ಲೀಟರ್ ಬಿಸಿನೀರು ಒದಗಿಸುವ ಸೌರಶಕ್ತಿಯಿಂದ ನೀರು ಕಾಯಿಸುವ ಈ ವಿಧಾನ ಅಳವಡಿಸಲು ಮನೆಯ ಮೇಲ್ಛಾವಣಿ 200 ಕೆ.ಜಿ. ಭಾರವನ್ನು ತಡೆದುಕೊಳ್ಳುವಂತಿರಬೇಕು. ಎಂಟು ಅಡಿ ಅಗಲ ಎಂಟು ಅಡಿ ಉದ್ದವಷ್ಟು ಜಾಗವಿರಬೇಕು ಹಾಗೂ ಅಲ್ಲಿ ನೆರಳು ಬೀಳುತ್ತಿರಬಾರದು. ಕನಿಷ್ಠ ದಿನದಲ್ಲಿ 5ಗಂಟೆ ಕಾಲವಾದರೂ ಅಲ್ಲಿ ನೆರಳು ಬೀಳಬಾರದು ಎಂದು ಐಇಐ ಎಚ್ಚರಿಸಿದೆ.

ಇಂಡಿಯನ್ ರಿನ್ಯೂವೆಬಲ್ ಎನರ್ಜಿ ಡೆವಲಪ್‌ಮೆಂಟ್ (ಐಆರ್‌ಇಡಿಎ) ಈ ಸೌರಶಕ್ತಿಯಿಂದ ನೀರು ಕಾಯಿಸುವ ವಿಧಾನ ಖರೀದಿದಾರರಿಗೆ ಸಾಲ ಒದಗಿಸುತ್ತಿದೆ. ದಿನಕ್ಕೆ 2,500 ಲೀಟರ್‌ನಿಂದ ಅದಕ್ಕೂ ಹೆಚ್ಚಿನ ಪ್ರಮಾಣದ ನೀರು ಕಾಯಿಸುವ ಈ ವಿಧಾನ ಅಳವಡಿಸಿಕೊಳ್ಳುವುದಕ್ಕೆ ಐಆರ್‌ಇಡಿಎ ನಿಂದ 2.5 ಲಕ್ಷ ರೂ.ಗಳವರೆಗೆ ನೇರಸಾಲ ಸೌಲಭ್ಯವಿದೆ.

# ಒಕ್ಕಲಿಗರು : ಪುರಾಣದಿಂದ ಪರಿಷತ್ ನಿಘಂಟಿನವರೆಗೆ

ಇತಿಹಾಸ ಮರೆತವರು ಇತಿಹಾಸ ಸೃಷ್ಟಿಸಲಾರರು ಎಂಬ ಡಾ|| ಅಂಬೇಡ್ಕರ್ ಮಾತು ಎಲ್ಲ ಜಾತಿ ವರ್ಗಕ್ಕೂ ಅನ್ವಯ. ಒಕ್ಕಲಿಗರ ಸಾಮಾಜಿಕ, ರಾಜಕೀಯ, ಆರ್ಥಿಕ ಪ್ರಗತಿ ಹಿನ್ನೆಲೆಯಲ್ಲಿ ಒಕ್ಕಲಿಗ ಪದದ ನಿಷ್ಪತ್ತಿ, ಅರ್ಥವಿವರಣೆ ಬಗ್ಗೆ ಪ್ರಸ್ತಾಪ ಸೂಕ್ತ.

**ಕ್ರಿಸ್ತಶಕ 7 ರಿಂದ 14 ನೇ ಶತಮಾನದವರೆಗೆ ವೈಭವದಿಂದ ಕರ್ನಾಟಕವನ್ನಾಳಿದ ರಾಷ್ಟ್ರಕೂಟರು ಒಕ್ಕಲಿಗ ಗೌಡರಾಗಿದ್ದು ನೇಗಿಲನ್ನೇ ರಾಜಚಿಹ್ನೆಯನ್ನಾಗಿ ಹೊಂದಿದ್ದರು. ಕಾವೇರಿಯಿಂದ ನರ್ಮದಾ ನದಿವರೆಗಿನ ವಿಶಾಲರಾಜ್ಯಕ್ಕೆ ಸಾಮ್ರಾಟರಾಗಿದ್ದ ಅವರ ಪ್ರಭಾವ ಹಿಮಾಲಯ ತಪ್ಪಲಿನವರೆಗೆ ಇತ್ತು. ಇಂದು ದೇಶದಲ್ಲಿ ಹೊಸ ಇತಿಹಾಸ ಸೃಷ್ಟಿಯಾಗುತ್ತಿರುವ ಸಂದರ್ಭದಲ್ಲಿ ಒಕ್ಕಲಿಗ ಜನಾಂಗದ ಒಂದು ಹಿನ್ನೋಟ ಪ್ರಸ್ತುತ....**

● **ಪ್ರೊ. ಡಿ ಕೆ ಶಿವಣ್ಣ** ಕೃಪೆ : **ಕನ್ನಡ ಪ್ರಭ**

ಒಕ್ಕಲಿಗ ಪದ ಒಕ್ಕು ಅಥವಾ ಒಕ್ಕಲು ಮೂಲದಿಂದ ನಿಷ್ಪನ್ನ. ಒಕ್ಕು, ಒಕ್ಕಲಾಟ ಎಂಬುದು ಬೆಳೆ ಕೊಯ್ದು, ಕಣದಲ್ಲಿ ಹಾಕಿ, ಎತ್ತುಗಳಿಂದ ತುಳಿಸಿ, ಹುಲ್ಲು-ಕಾಳನ್ನು ಬೇರ್ಪಡಿಸುವ ಕೆಲಸಕ್ಕೆ ಸೂಚಕ.

ತುಳುನಲ್ಲಿ ಒಕ್ಕು ಎಂದರೆ ಉಳುಮೆ ಎಂದರ್ಥ. ಇಲ್ಲಿ ಒಕ್ಕು ಬೇಸಾಯವನ್ನೆ ಉದ್ದೇಶಿಸಿದೆ. ಜಾನಪದದಲ್ಲಿ ಒಕ್ಕಲಿಗರ ಮೂಲಕ್ಕೆ ಸಂಬಂಧಿಸಿದ ಸ್ವಾರಸ್ಯಕರ ಕಥೆಗಳಿವೆ. ಮಹಾಭಾರತದ ಉಪಕಥೆಯೊಂದರ ಆಧಾರದಿಂದ ಒಕ್ಕಲಿಗ ಪದ ಒಕ್ಕು ಪದದಿಂದ ನಿಷ್ಪತ್ತಿಯಾಯಿತೆಂದು ಹೇಳುತ್ತಾರೆ.

**ಮಹಾಭಾರತ**

ಅರ್ಜುನ ಜೋಗಿಯಾಗಿ ಕಿನ್ನರಿ ನುಡಿಸುತ್ತಾ ನರ್ತಿಸುತ್ತಿದ್ದ. ಅದನ್ನು ನೋಡಲು ಜನ ಸೇರಿದರು. ಮನೆಗೆಲಸ ಮುಗಿಸಬೇಕಿದ್ದ ಸೊಸೆಯೊಬ್ಬಳು ಮಗುವನ್ನು ಜಗುಲಿ ಮೇಲೆ ಕೂರಿಸಿಕೊಂಡು ಸೋರೆಕಾಯಿ ಹೆಚ್ಚುತ್ತಾ ನೃತ್ಯ ನೋಡುವುದರಲ್ಲಿ ಮೈಮರೆತು ಮಗುವಿನ ತಲೆ-ಕಾಲನ್ನು ಕೊಯ್ದುಬಿಟ್ಟಳು. ಜನರ ಗಲಭೆಯಲ್ಲಿ ಮಗುವಿನ ಚೀರಾಟ ಕಿವಿಗೆ ಬೀಳಲಿಲ್ಲ. ಅನಂತರ ನೋಡಿ ಚೀತ್ಕರಿಸಿದಾಗ ಅರ್ಜುನನ ಗಮನ ಅವಳತ್ತ ಹರಿಯಿತು. ಮಗುವನ್ನು ಬದುಕಿಸಿಕೊಡೆಂದು ಅರ್ಜುನನನ್ನು ಬೇಡಿದಳು. ತಾನೇನು ತ್ರಿಮೂರ್ತಿಗಳಲ್ಲೊಬ್ಬನೆ ಎಂದು ಆತ ಕೇಳಿದ. ಬದುಕಿಸಿಕೊಡದಿದ್ದಲ್ಲಿ ತಾನು ಆತನ ಕಾಲಮೇಲೆ ಪ್ರಾಣ ಬಿಡುವುದಾಗಿ ಆಕೆ ಗೋಳಾಡಿದಳು ಬೆಟ್ಟದ ಭೈರವೇಶ್ವರ ಕೃಪೆಯಿದ್ದಲ್ಲಿ ಮಗು ಬದುಕಲಿ ಎನ್ನುತ್ತಾ ಅರ್ಜುನ, ಕಡಿದುಬಿದ್ದಿದ್ದ ತಲೆಯನ್ನು ಕುತ್ತಿಗೆಗೆ ಸೇರಿಸಿದ. ಮಗುವಿಗೆ ಜೀವ ಬಂತು. ಕೊಯ್ದಿರುವ ಕಾಲನ್ನೂ ಕೂಡಿಸಿಕೊಡಲು ಆಕೆ ಕೇಳಿದಾಗ ಅರ್ಜುನ, ಪದೇಪದೇ ದೇವರಲ್ಲಿ ಗೋಳಿಡಬಾರದು, ಈ ಕಂದ ಒಂದೇ ಕಾಲಿನವನು', ಎಂದು ಹೇಳಿದ. ಒಂದು ಕಾಲಿನ ಹುಡುಗ ಒಕ್ಕಲಿಗನಾದ. ಅವನ ವಂಶಜರು ಒಕ್ಕಲಿಗರಾದರು. ಒಕ್ಕಲಿಗರಿಗೆ ಆದಿಚುಂಚನಗಿರಿಯ ಭೈರವೇಶ್ವರ ಮನೆ ದೇವರಾದ.

ಮೈಸೂರು ಗೆಜೆಟಿಯರ್‌ನಲ್ಲಿ ಇನ್ನೊಂದು ದಂತ ಕಥೆ, ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನಿಗೆ ತಪಸ್ವಿಯೊಬ್ಬರು ಸಿದ್ಧರಸ ಅನುಗ್ರಹಿಸಿದರು. ಆತ ಅದನ್ನು ಕಬ್ಬಿಣದ ಮೇಲೆ ಪ್ರೋಕ್ಷಿಸಿ ಚಿನ್ನ ಪಡೆಯುತ್ತಿದ್ದ. ಕಬ್ಬಿಣ ಸಂಗ್ರಹಿಸಲು ರೈತರಿಗೆ ವರ್ಷಕ್ಕೊಂದು ಸವಕಲು ಕುಳವನ್ನು ಭೂಕಂದಾಯದ ಬದಲಿಗೆ ಕೊಡಲು ಆಜ್ಞಾಪಿಸಿದ. ಸಂಗ್ರಹಿತ ಕಬ್ಬಿಣವನ್ನು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ಹೊಯಿಸೊಳಲುಗ್ರಾಮದಬಳಿ ಶೇಖರಿಸಿ ಚಿನ್ನ ಪಡೆಯುತ್ತಿದ್ದ. ಹೀಗೆ ಕ್ರಮವಾಗಿ ಒಂದೊಂದು ಕುಳ ಕೊಡುತ್ತಿದ್ದವರು ಒಕ್ಕಲಿಗ ಎನಿಸಿಕೊಂಡರೆಂದು ರೈತರ ಅಭಿಪ್ರಾಯ. ಮಾಕೋನಹಳ್ಳಿ ದೊಡ್ಡಪ್ಪಗೌಡರು, ಇದೊಂದು ಭಾವನಾತ್ಮಕ ಕತೆಯೆ ವಿನಾ ಒಕ್ಕುಳ ಕಾರ್ಯಕ್ಕೂ, ಒಕ್ಕಲಿಗ ಪದಕ್ಕೂ ಸಂಬಂಧವಿಲ್ಲ ಎನ್ನುತ್ತಾರೆ.

ಮತ್ತೊಂದು ದಂತ ಕತೆಯ ಪ್ರಕಾರ ಪಾರ್ವತೀದೇವಿ ಚೆಲ್ಲಿದ ಹಾಲಿಂದ ಹುಟ್ಟಿದವರಿಗೆ ಒಕ್ಕಹಾಲು ಮಕ್ಕಳು ಅಥವಾ ಒಕ್ಕಲು ಮಕ್ಕಳು ಎಂಬ ಹೆಸರು.

ಇಂದು ಒಕ್ಕಲಿಗ ಜನಾಂಗದಲ್ಲಿ ಗೌಡ ಉಪನಾಮ ಜಾತಿಸೂಚಕ. ಇದು ಹಿಂದೆ ಸ್ಥಾನಸೂಚಕವಾಗಿತ್ತೆಂದು ತಿಳಿದುಬಂದಿದೆ ಗೌಡ ಪದದ ಹಲವು ರೂಪಗಳಾದ ಗವುಡ ಗವುಂಡ, ಗಾಮುಂಡ, ಗಾವುಂಡ, ಗಉಡ ಪದಗಳು ಶಾಸನಗಳಲ್ಲಿವೆ.

(ಮುಂದಿನ ಸಂಚಿಕೆ ನೋಡಿ)

## ವೀರ ಗೀತೆ

ಕೊಡಗಿನವ ನಾನೆಂದು ಎದೆತಟ್ಟಿ ಹೇಳು ।
ಕೊಡಗಿಗೆ ಜಯವೆಂದು ಕೈಯೆತ್ತಿ ಹೇಳು ॥

ಕೊಡಗಿನ ನಾಡಿದುವೆ ಗುಡಿಯೆಂದು ತಿಳಿಯೋ ।
ಪೂಜಿಸು ವರತಾಯಿ ಕಾವೇರಿಯಮ್ಮೆಯನು ॥

ಕೊಡಗಿನ ನೆಲದ ಮಣ್ಣು ಬಂಗಾರವೆನ್ನು ।
ಕೊಡಗಿನ ವನಸಿರಿಯು ಸಿಂಗಾರವೆನ್ನು ॥

ಕೊಡಗಿನ ಜನತೆಯನ್ನು ವೀರ ಧೀರರೆನ್ನು ।
ಕೊಡಗಿನ ವನಿತೆಯನ್ನು ದೇವ ಕನ್ಯೆಯೆನ್ನು ॥

ಅನುದಿನವು ನೆನೆಯುತ್ತಿರು ಕೊಡಗಿನ ನಾಡ ನುಡಿಯನ್ನು ॥
ಮರೆಯದಿರು ನೀನೆಂದು ಅರೆ ಭಾಷೆಯ ಜನರನ್ನು ।

ಕೊಡಗಿನ ಕಂದ ಇದೇ ನಿನಗೆ ಆನಂದ ।
ತನ್ನತನವ ಉಳಿಸಿ ಮೆರೆಯುತ್ತಿರು ನೀನಿಲ್ಲಿ ॥

ಕೊಡಗನ್ನು ಎಂದು ತಳ್ಳದಿರು ದಾಸ್ಯಕ್ಕೆ ।
ಕೊಡಗನ್ನು ನೀನು ಬಲಪಡಿಸು ಇಂದು ॥

ಕೊಡಗಿನವ ನಾನೆಂದು ಎದೆತಟ್ಟಿ ಹೇಳು ।
ಕೊಡಗಿಗೆ ಜಯವೆಂದು ಕೈಯೆತ್ತಿ ಹೇಳು ॥

● ಪಟ್ಟೆಡ ಪ್ರಭಾಕರ

## ಅಣು ಬಾಂಬ್ ಎಂದರೇನು ?

ವಿಶ್ವ ವಿಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ 1905ರಲ್ಲಿ ವಸ್ತುವನ್ನು ಶಕ್ತಿಯನ್ನಾಗಿ ಮಾರ್ಪಡಿಸುವಂತಹ ಒಂದು ಗಣಿತ ಸೂತ್ರವನ್ನು ಕಂಡುಹಿಡಿದರು. ಈ ಸೂತ್ರದ ಪ್ರಕಾರ ಒಂದು ಗ್ರಾಂ ವಸ್ತುವನ್ನು ಶಕ್ತಿಯಾಗಿ ಪರಿವರ್ತಿಸಿದಲ್ಲಿ, ಅದು 90,000 ಶತಕೋಟಿ ಜೂಲ್‌ಗಳಷ್ಟು ಶಕ್ತಿಯನ್ನು ಉತ್ಪತ್ತಿ ಮಾಡುತ್ತದೆ. ಅಂದರೆ ಒಂದು ಪೌಂಡ್‌ನಷ್ಟು ವಸ್ತು ಉತ್ಪತ್ತಿ ಮಾಡುವ ಶಕ್ತಿ 1,500,000 ಟನ್‌ಗಳಷ್ಟು.

## ಎಲೆಯಡಿಕೆ ಜಗಿಯುವುದರಿಂದ ಬಾಯಿ ಏಕೆ ಕೆಂಪಗಾಗುತ್ತದೆ.

ನಾವು ವೀಳ್ಯದೆಲೆ ಜಗಿದಾಗ ನಮ್ಮಬಾಯಿ ಕೆಂಪಾಗುತ್ತದೆ. ವಿಶ್ವದ ಅನೇಕ ದೇಶಗಳಲ್ಲಿ ಜನ ವೀಳ್ಯದೆಲೆ ತಿನ್ನುತ್ತಾರೆ. ವಿಶ್ವದ ಜನರಲ್ಲಿ ಸುಮಾರು ಶೇಕಡ 10ರಷ್ಟು ಮಂದಿಗೆ ವೀಳ್ಯದೆಲೆ ಜಗಿಯುವುದು ತುಂಬ ಪ್ರಿಯವಾದ ಹವ್ಯಾಸ. ಇದನ್ನು ಜಗಿದಾಗ ಬಾಯಿ ಏಕೆ ಕೆಂಪಗಾಗುತ್ತದೆ ಗೊತ್ತೆ ?

ನಾವು ಜಗಿಯುವ ವೀಳ್ಯದೆಲೆ ಬಳ್ಳಿಯ ಗಿಡದಲ್ಲಿ ಬಿಡುತ್ತದೆ. ಎಲೆಗಳು ಒಣಗದಿರಲೆಂದು ಗಿಡಗಳ ಮೇಲೆ ಚಾಪೆಗಳನ್ನು ಹೊದಿಸಲಾಗುವುದು. ಈ ವೀಳ್ಯದೆಲೆಯನ್ನು ಕರ್ನಾಟಕ ಬಿಹಾರ್. ಮಧ್ಯ ಪ್ರದೇಶ, ಪಶ್ಚಿಮ ಬಂಗಾಳ ಮತ್ತು ಉತ್ತರ ಪ್ರದೇಶ ಮುಂತಾದ ಭಾಗಗಳಲ್ಲಿ ಬೆಳೆಯಲಾಗುತ್ತದೆ.

ನಾವು ವೀಳ್ಯದೆಲೆಯ ಜೊತೆಗೆ ಅಡಿಕೆ, ಖದಿರು, ಸುಣ್ಣ ಏಲಕ್ಕಿ, ಲವಂಗ, ಕೊಬ್ಬರಿ ಹಾಗೂ ಇತರ ಸುಗಂಧ ದ್ರವ್ಯವನ್ನು ಸೇರಿಸಿ, ತೆಗೆದುಕೊಳ್ಳುತ್ತೇವೆ. ವೀಳ್ಯದೆಲೆ ಒಂದರಿಂದಲೇ ಬಣ್ಣ ಬರುವುದಿಲ್ಲ. ಅಡಿಕೆ ಸಹ ಕೆಂಪು ಬಣ್ಣ ಉಂಟು ಮಾಡುವುದಿಲ್ಲ. ಖದಿರು ಕೆಂಪು ಬಣ್ಣವನ್ನುಂಟು ಮಾಡುತ್ತದೆ. ಖೈರಾ ಎಂಬ ಮರದ ರಂಬೆಯಿಂದ ಖದಿರನ್ನು ಪಡೆಯಲಾಗುವುದು. ಅದರ ಬಣ್ಣ ನಸುಗೆಂಪು. ಕುದಿಯುವ ನೀರಿಗೆ ಅದನ್ನು ಹಾಕಿದರೆ ಕೆಂಪು ಬಣ್ಣಕ್ಕೆ ತಿರುಗುತ್ತದೆ. ನೀರಿನಲ್ಲಿ ಕುದಿದ ನಂತರ, ಅದು ಹಿಟ್ಟಿನ ಹಾಗೆ ಆಗುತ್ತದೆ. ಅದನ್ನು ಎಲೆಯ ಮೇಲೆ ಸುಣ್ಣ ಸವರಿ, ಅದರ ಮೇಲೆ ಲೇಪಿಸಲಾಗುವುದು. ಸುಣ್ಣ ಮತ್ತು ಖದಿರಿನ ದ್ರವದ ಲೇಪನದಿಂದ, ರಾಸಾಯನಿಕ ಪಕ್ರಿಯೆ ಉಂಟಾಗಿ, ಖದಿರು ಮತ್ತಷ್ಟು ಕೆಂಪಾಗುತ್ತದೆ. ನಾವು ವೀಳ್ಯದೆಲೆಯನ್ನು ಜಗಿದಾಗ ನಮ್ಮ ಬಾಯಿಯೊಳಗೆ ಜೊಲ್ಲುರಸಗಳು ಸಹ ಸೇರಿಕೊಂಡು ಬಾಯಿಯನ್ನು ಕೆಂಪಗೆ ಮಾಡುತ್ತದೆ.

**ಕೊಡಗು ಸಂಗಾತಿ ನಿಮ್ಮ ಮಗು ಇದನ್ನು ಬೆಳೆಸಿ ಪೋಷಿಸಬೇಕೆಂದು ಪತ್ರಿಕಾ ವ್ಯವಸ್ಥಾಪಕ ಬಳಗ ಬೇಡಿಕೊಳ್ಳುತ್ತದೆ....**

# ಗೌಡ – ಗೌಡ ರಾಜ್ಯ

ಊಂಗೊಬ್ಬ ಗೌಡ ದೇಶಕ್ಕೊಬ್ಬ ದೊರೆ. ಇದು ಕನ್ನಡ ನಾಡುನುಡಿ. ದೇಶದ ಜನತೆ ಪೂರ್ವದ ಒಕ್ಕಲಿಗ ಗೌಡರುಗಳ ಬಳಕೆಯ ಮಾತು. ಇದನ್ನು ಗೌಡಳ್ವಿಕೆಯೆಂದೇ ಕರೆಯುತ್ತಾರೆ.

"ಗೌಡ ಶಬ್ದವು ಅತೀ ಪ್ರಾಚೀನವಾದದ್ದು. ಪುರಾತನ ಗದ್ಯ ಸಾಹಿತ್ಯದಲ್ಲಿ ಅಂಗ ವಂಗ-ಕಳಿಂಗ ಮುಂತಾದ ಐವತ್ತಾರು ದೇಶಗಳ ಹೆಸರು ಹೇಳುವಾಗ ಗೌಡ ದೇಶವು ಇರುತ್ತದೆ. ಇದರಿಂದ ಗೌಡರಾಜ್ಯವೊಂದು ಇತ್ತೆಂಬುದಾಗಿ ತಿಳಿಯಬಹುದು.

ಪ್ರಸಿದ್ಧ ಚರಿತ್ರೆಕಾರರಾದ ಪ್ರೊ|| ಪಿ. ಎನ್. ಓಕ್, ಎಂ.ಎ., ಎಲ್.ಎಲ್.ಬಿ. ಇವರು ತಮ್ಮ "ಭಾರತದ ಇತಿಹಾಸದ ಮೇಲೆ ಹೊಸ ಬೆಳಕು" ಎಂಬ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ - "ಪೂರ್ವದಲ್ಲಿ ಆಂಧ್ರ, ತಮಿಳುನಾಡು, ಕರ್ನಾಟಕ, ಮಹರಾಷ್ಟ್ರ, ಗುಜರಾತ್‌ಗಳು ಪಂಚಗೌಡ ದೇಶವೆಂದು ಕರೆಯಲ್ಪಟ್ಟದ್ದು" ಎಂದು ಹೇಳುತ್ತಾರೆ. ಇವರ ಅಭಿಪ್ರಾಯದಂತೆ "ದ್ರಾವಿಡ" ಯೆಂಬುದು ಒಂದು ಸಂಸ್ಕೃತಿಯ ಹೆಸರೇ ವಿನಃ ಅದು ಒಂದು ಜಾತಿಯೆನಿಸುವುದಿಲ್ಲ.

ಅದರಂತೆ 'ಗೌಡ'ಎಂಬುದು ಆ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಸ್ಕೃತಿಯ ಹೆಸರು ಎಂಬುದು ಸ್ಪಷ್ಟವಾಗಿದೆ ಮತ್ತು ಐತರೇಯ ಅರಣ್ಯದಲ್ಲಿ ಕಂಡುಬರುವ ಚೇರ ಜನಾಂಗ ಬಿಹಾರದಿಂದ ಅಸ್ಸಾಂವರೆಗೆ ಪ್ರಬಲರಾಗಿದ್ದರು. ಅವರು ಗೌಡ ಸಂಸ್ಕೃತಿಯ ಪರಿಪೋಷಕರಾಗಿ ಪಾಲ್ಗೊಂಡಿದ್ದರು ಎಂತಲೂ ಅಭಿಪ್ರಾಯವಾಗುತ್ತದೆ.

ಆರ್ಯ ವೃತ್ತದಿಂದ ದಕ್ಷಿಣಕ್ಕೆ ವಲಸೆ ಬಂದ ಚೇರರು ತಮ್ಮ ಸಂಸ್ಕೃತಿಯ ಪ್ರತೀಕವಾಗಿ "ಗೌಡ" ಎಂಬ ಹೆಸರಿನಿಂದಲೇ ಇಂದಿಗೂ ಉಳಿದುಕೊಂಡು ಬಂದಿದ್ದಾರೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸೋಮೇಶ್ವರನ ಮಗ 2ನೇ ವಿಕ್ರಮಾದಿತ್ಯ ಬಂಗಾಳದ ಗೌಡ ರಾಜ್ಯ ಮತ್ತು ಅಸ್ಸಾಂಗಳನ್ನು ಗೆದ್ದಂತೆ ಉಲ್ಲೇಖವಿದೆ. ರಾಷ್ಟ್ರಕೂಟ ಅರಸ ಅಮೋಘ ವರ್ಷನ ಮಗನಾದ 2ನೇ ಕೃಷ್ಣ ಅಥವಾ ಅಕುಲವರ್ಷನು "ಲಾಟ್" ರನ್ನು ಮತ್ತು "ಗೌಡ"ರುಗಳನ್ನು ಸದೆ ಬಡಿದಂತೆಯೂ ಇದೆ.

ಈ ಗೌಡ ರಾಜ್ಯಗಳು ಯಾವುದೆಂದು ತಿಳಿಯದು. ಆದರೆ ಚೋಳರಿಂದ ನಾಶವಾದ ತಲಕಾಡಿನ ಗಂಗರಸ ಸಂತತಿಯಲ್ಲಿ ಚೋರ ರಂಗ ಎಂಬುವನು ಅಳಿದುಳಿದ ಸೈನಿಕರನ್ನು ಕೂಡಿಕೊಂಡು ಬಹುದೂರದ ಒರಿಸ್ಸಾ ಪ್ರಾಂತ್ಯಕ್ಕೆ ನುಗ್ಗಿ ಆ ದೇಶವನ್ನು ಗೆದ್ದು ಗಂಗಾ ರಾಜ್ಯವನ್ನು ಸ್ಥಾಪಿಸಿದನು. ಪೂರಿ ಜಗನ್ನಾಥ ದೇವಾಲಯವನ್ನು, ಕೋನಾರ್ಕ್ ಸೂರ್ಯ ದೇವಾಲಯವನ್ನು ಕಟ್ಟಿಸಿದವರು ಈ ವಂಶದವರೇ. ಜಗನ್ನಾಥ ದೇವಾಲಯದಲ್ಲಿ ಇಂದಿಗೂ ಇರುವ ದಾಖಲೆಯಂತೆ ಈ

---

ಶ್ರೀ ದೊಡ್ಡಪ್ಪಗೌಡರು ಮಾಕೋನಹಳ್ಳಿಯ ಒಬ್ಬ ಕಾಫಿ ಪ್ಲಾಂಟರು. ಶ್ರೀಯುತರು ಬೆಂಗಳೂರು ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ನಂತರ 1928ರಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಕಾಂಗ್ರೆಸ್ಸಿಗೆ ಸೇರಿದರು. ಅಂದಿನಿಂದಲೂ ಕಾಂಗ್ರೆಸ್ ಸಂಸ್ಥೆಗಾಗಿ ದುಡಿದಿದ್ದಾರೆ. ಇವರು ಡಾ|| ನಾ. ಸು. ಹರ್ಡೀಕರ್‌ರವರ ಶಿಷ್ಯರಾಗಿ ಹಿಂದೂಸ್ತಾನೀ ಸೇವಾದಳಕ್ಕೆ ಸೇರಿ ಉಪ್ಪಿನ ಸತ್ಯಾಗ್ರಹ, ಸೊಲ್ಲಾಪುರದಲ್ಲಿ ಮಿಲಿಟರಿ ಕಾಯಿದೆ ಭಂಗದಲ್ಲಿ ನಂತರ ಅರಣ್ಯ ಸತ್ಯಾಗ್ರಹಗಳನ್ನು ಯಶಸ್ವಿಯಾಗಿ ನಡೆಸಿದ್ದಾರೆ.

1932ರ ನಂತರ ಊರಿನ ಅಭಿವೃದ್ಧಿಗಾಗಿ ತಾಲ್ಲೂಕು ಕಾಂಗ್ರೆಸ್ಸಿನ ಸಂಘಟನೆ, ಮಂಡಳಿ, ಸಹಕಾರ ಸಂಘ, ಏಲಕ್ಕಿ ವರ್ತಕರ ಸಂಘ, ಒಕ್ಕಲಿಗರ ವಿದ್ಯಾರ್ಥಿಭವನದ ಸಮಿತಿ, ಸಣ್ಣ ಕಾಫಿ ಬೆಳೆಗಾರರ ಕಾರ್ಯಗಳಲ್ಲಿ ತುಂಬಾ ಆಸಕ್ತಿ ವಹಿಸಿ ದುಡಿದು ಅವುಗಳನ್ನು ಕಾರ್ಯಗತ ಮಾಡಿದ್ದಾರೆ. ನಂತರ ಶ್ರೀಯುತರು ಸಾರ್ವಜನಿಕ ಚಟುವಟಿಕೆಗಳಿಂದ ನಿವೃತ್ತರಾಗಿ ಸಾಹಿತ್ಯ ಮತ್ತು ಸಂಸ್ಕೃತಿಯ ದಿಸೆಯಲ್ಲಿ ಸೇವೆಯನ್ನು ಸಲ್ಲಿಸಲು ಹೊರಟು ತಮ್ಮ ಕುಲಬಾಂಧವರ ಪೂರ್ವ ಇತಿಹಾಸ, ಸಾಮಾಜಿಕ ವಿಚಾರ ಮಾಡುವವರಾಗಿ 'ಒಕ್ಕಲಿಗರು' ಎಂಬ ಪುಸ್ತಕವನ್ನು ಬರೆದಿದ್ದಾರೆ. ಇದರಿಂದ ಭಾರತದ ಇತಿಹಾಸ ಪುಟಕ್ಕೆ ಹೊಸ ಬೆಳಕನ್ನು ಚೆಲ್ಲುವುದಕ್ಕೆ ದಾರಿ ಮಾಡಿಕೊಟ್ಟಿದ್ದಾರೆ. ಇದೂ ಅಲ್ಲದೆ ಇವರು ಬರೆದಿರುವ ಸುಮಾರು 300 ಪುಟಗಳ "ಸತ್ಯಾಗ್ರಹಿ" ಎಂಬ ಕಾದಂಬರಿಯು ಆದಷ್ಟು ಶೀಘ್ರವಾಗಿ ಅಚ್ಚನ್ನು ಕಾಣಲಿದೆ. ಶ್ರೀಯುತ ದೊಡ್ಡಪ್ಪಗೌಡರು 80 ವರ್ಷ ಮೀರಿದವರಾದರೂ ಯುವಕರಂತೆ ಇನ್ನೂ ಹಗಲಿರುಳು ಸಾಮಾಜಿಕ ಮತ್ತು ಸಾಹಿತ್ಯ ಸೇವೆಯಲ್ಲಿ ನಿರತರಾಗಿರುವುದು ಶ್ಲಾಘನೀಯ.

– ಸಂ.

ವಂಶಿಕರು ಕ್ರಿ.ಶ. 1132 ರಿಂದ 1534 ರ ವರೆಗೆ ಆ ದೇಶವನ್ನು ಆಳುತ್ತಿದ್ದರು. ತ್ರಿಭುವನ ಮಲ್ಲನು 1126ರಲ್ಲಿ ಬಂಗಾಳದ ಗೌಡ ರಾಜ್ಯವನ್ನು ಸೋಲಿಸಿದನು ಎನ್ನುವುದಕ್ಕೆ ಇಲ್ಲಿ ಸ್ವಲ್ಪ ಮಟ್ಟಿಗೆ ಸಮರ್ಥನೆ ದೊರೆಯುತ್ತದೆ. ಚೋಳ ಗಂಗನು ಒರಿಸ್ಸಾ ಪ್ರಾಂತ್ಯಕ್ಕೆ ಧಾಳಿ ಇಟ್ಟ ಒಡನೆ ರಾಜ್ಯ ಸಂಪಾದನೆಯಾಯಿತೆಂದು ಊಹಿಸಲೂ ಸಾಧ್ಯವಿಲ್ಲ. ರಾಜ್ಯಗಳನ್ನು ಗೆದ್ದು, ಸೋತು, ಸ್ಥಿರವಾಗಿ ರಾಜ ಗದ್ದುಗೆಯನ್ನೇರಿ ರಾಜ್ಯಭಾರ ಮಾಡಲು ಉಪಕ್ರಮಿಸಿದ್ದು 1132ರಲ್ಲಿ ಎಂದು ಭಾವಿಸಬಹುದಾದರೆ ಅದಕ್ಕೆ ಕೇವಲ 8–10 ವರ್ಷಗಳ ಹಿಂದೆ ಇನ್ನೂ ಬಾಲ್ಯಾವಸ್ಥೆಯಲ್ಲಿ ಅಸ್ಥಿರವಾಗಿದ್ದ ಈತನ ರಾಜ್ಯದ ಮೇಲೆ ತ್ರಿಭುವನ ಮಲ್ಲನು ಧಾಳಿಯಿಟ್ಟು ಸೋಲಿಸಿರಬಹುದೆಂದು ಊಹಿಸಲು ಸಾಕಷ್ಟು ಸಮರ್ಥನೆ ದೊರೆಯುತ್ತದೆ. ಆ ಕಾಲದಲ್ಲಿ ಬಂಗಾಳ- ಒರಿಸ್ಸಾಗಳ ಪ್ರಾದೇಶಿಕ ಗಡಿಗಳು ಯಾವುದೂ ಇರಲಿಲ್ಲವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ.

1534 ರಲ್ಲಿ ಮುಸಲ್ಮಾನರ ಧಾಳಿಯಿಂದ ನಾಶವಾದ ಸಂತತಿ ಮತ್ತೆ ತಲೆ ಎತ್ತಿಲ್ಲ. "ಗೌಡ ಬಂಗಾಳಿ" ಯೆಂಬ ಜನರು ಈಗಲೂ ಬಂಗಾಳದಲ್ಲಿ ಇರುವುದಾಗಿ ತಿಳಿದು ಬರುತ್ತದೆ.

"ಗೌಡ ಸಾರಸ್ವತ"ರು ಎಂಬುದಾಗಿ ಕೊಂಕಣಿ ಜನರು ಹೇಳಿಕೊಳ್ಳುತ್ತಾರೆ. ಇವರು ಕೊಂಕಣ ಪ್ರಾಂತದವರು ಇಲ್ಲಿ "ಗೌಡ" ಎಂಬುದರ ಪ್ರಾಮುಖ್ಯತೆ ಏನೆಂಬುದು ತಿಳಿಯದು.

**ಗೌಡ**

"ಗೌಡ" ಎಂದರೆ ಯಜಮಾನ ಎಂದು ಅರ್ಥವಾಗುತ್ತದೆ. ಪ್ರಾಚೀನ ಗ್ರಂಥಗಳಲ್ಲಿಯೂ, ಶಾಸನಗಳಲ್ಲಿಯೂ, ಗಾವುಂಡ, ಗವೂಂಡ, ಗೌಡಿ, ಗವೂಂಡಿ, ಗವೂಂಡರ್ ಎಂಬ ಪದಗಳನ್ನು ನೋಡಲು ಹೇರಳವಾಗಿ ಸಿಕ್ಕುತ್ತವೆ. ಕಡೂರು ತಾಲ್ಲೂಕು ಯಗಟಿ ಹೋಬಳಿ ಮರುವಂಜಿ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿ ನೆಟ್ಟಕಲ್ಲು.

ಅನ್ತುನೆಗೆವ್ದಿ ಬಮ್ಮಗಾವುಂಡಗಂ ಆತನ ಕುಲವಧು ವಿಚವೆ ಗಾವುಂಡಿಂಗಂ ಪುಟ್ಟಿದರು. ಸುಪುತ್ರ ಕುಲದೀಪಕರು... ಸ್ವಸ್ತಿ ಸಮಸ್ತ ಗುಣ ಸಂಪನ್ನಂ ನುಡಿದು ಮತ್ತೆನ್ನಂ ಗೋತ್ರಪವಿತ್ರಂ ಪರನಾರೀ ಪುತ್ರ ಕುಲದೇವರ ಶ್ರೀ ಪಾದ ಪಂಕಜ ಭ್ರಮರನಪ್ಪಸೋಮ ಗೌವುಂಡಂ ನಾಗವ್ವೆ ಗೌಡಿಗಂ ಪುಟ್ಟಿದ ಪುತ್ರರು ಮಲ್ಲಗೌಡ ಬಸವಗೌಡ. .

ಗೌಡಾಳ್ವಿಕೆಯು ಚೇರರ ಕಾಲದಲ್ಲಿಯೆ ಪ್ರಾರಂಭವಾಗಿ ಗಂಗರಸರ ಕಾಲಕ್ಕೆ ದಕ್ಷಿಣ ಮೈಸೂರಾದ್ಯಂತ ವಿಸ್ತರಿಸಿದಂತೆ ಕಾಣುತ್ತದೆ. ಚೇರ ಪತಿಗಳು ಆದಿಯಲ್ಲಿ ಕೇರಳ, ತಮಿಳುನಾಡುಗಳಲ್ಲಿ ರಾಜ್ಯ ವಿಸ್ತರಣೆ ಮಾಡುತ್ತಾ ಹೋದಂತೆ ಗೌಡಾಳ್ವಿಕೆಯೂ ಬೇರೂರಿತು. ಇದರಿಂದ ಈಗಲೂ ಆ ಭಾಗದಲ್ಲಿ ವೆಳ್ಳಾಲ ಗೌಂಡರ್, ಬೆಳ್ಳಿಯ ಗೌಂಡರ್‌ಗಳೆಂದು ಇದ್ದಾರೆ. ಇವರ ಮನೆ ಮಾತು ಮಲೆಯಾಳ, ತಮಿಳು. ಕೊಯಮುತ್ತೂರು, ಸತ್ಯಮಂಗಲ, ಪಾಲಘಾಟ್ ಕಡೆಯೂ ಗೌಡರ್, ಗೌಂಡರ್‌ಗಳು ಇದ್ದಾರೆ. ಇವರ ಮನೆ ಮಾತು ಕನ್ನಡ. ಮನೆಯಿಂದ ಹೊರಗೆ ಬಂದಾಗ ಶುದ್ಧ ತಮಿಳರೇ. ಈ ಎಲ್ಲರೂ ಒಕ್ಕಲಿಗರೇ ಆಗಿರುತ್ತಾರೆ. ಇವರ ಮನೆದೇವರು ಶ್ರೀ ಕಾಲಭೈರವ.

(ಮುಂದಿನ ಸಂಚಿಕೆ ನೋಡಿ)

## ಉಂಡು ಹೋದ, ಕೊಂಡು ಹೋದ

ಯಾವುದೇ ಒಂದು ಸಂದರ್ಭದಲ್ಲಿ ಇಟಲಿಯ ಸರ್ವಾಧಿಕಾರಿಯಾಗಿದ್ದ ಮುಸಲೋನಿ ದೊಡ್ಡ ಭೋಜನಕೂಟವನ್ನು ಏರ್ಪಡಿಸಿದ್ದ. ಅಲ್ಲಿ ಹಲವಾರು ಸ್ವದೇಶಿ ವಿದೇಶಿ ಗಣ್ಯರು ನೆರೆದಿದ್ದರು. ಊಟ ಮಾಡುತ್ತಿದ್ದಾಗ ಇದ್ದಕ್ಕಿದ್ದಂತೆ ಕರೆಂಟ್ ಹೋಗಿ ಎಲ್ಲೆಲ್ಲಿಯೂ ಗಾಢಾಂಧಕಾರ ಕವಿಯಿತು. ಒಬ್ಬ ಮಹಿಳೆ 'ನನ್ನ ರತ್ನಹಾರ ರತ್ನಹಾರ' ಎಂದು ಬೊಬ್ಬೆಯಿಟ್ಟಳು. ಸ್ವಲ್ಪ ಹೊತ್ತಲ್ಲೇ ವಿದ್ಯುದ್ದೀಪಗಳು ಹತ್ತಿಕೊಂಡವು. ಆಗ ಮುಸಲೋನಿ 'ತಾವು ಸಮಾಧಾನ ತೆಗೆದುಕೊಳ್ಳಿ, ಅದು ಎಲ್ಲಿದ್ದರೂ ಅದನ್ನು ಹುಡುಕಿಸಿ ಕೊಡುತ್ತೇನೆ' ಎಂದು ಮಹಿಳೆಗೆ ಆಶ್ವಾಸನೆ ನೀಡಿದರು.

ಅನಂತರ ಸರ್ವಾಧಿಕಾರಿ ಸಭೆಯನ್ನುದ್ದೇಶಿಸಿ, 'ಮಹನೀಯರೆ, ಮಹಿಳೆಯರೇ, ಸಂತೋಷಕೂಟದಲ್ಲಿ ಹೀಗಾಗಿರುವುದು ತುಂಬಾ ವಿಷಾದದ ಸಂಗತಿ. ಇದು ನಮ್ಮ ದೇಶದ ಮರ್ಯಾದೆಗೆ ಸಂಬಂಧಪಟ್ಟ ವಿಷಯ. ಮತ್ತೊಮ್ಮೆ ದೀಪಗಳುಆರಿಹೋಗಲಿ ಎಂದು ಆಜ್ಞಾಪಿಸುತ್ತೇನೆ. ಈ ಟೇಬಲ್ಲಿನ ಮೇಲೆ ಒಂದು ಬೆಳ್ಳಿಯ ತಟ್ಟೆಯನ್ನು ಇರಿಸಲಾಗಿದೆ. ಹಾರ ಕದ್ದವರು ಅದನ್ನು ಈ ತಟ್ಟೆಯಲ್ಲಿ ಹಾಕಲಿ. ಎಲ್ಲರ ಹತ್ತಿರ ಬಂದು ಹುಡುಕುವುದು ಅನಾಗರೀಕರ ವರ್ತನೆಯಾಗುವುದರಿಂದ ನಾನು ಹಾಗೆ ಮಾಡಲು ಇಚ್ಛಿಸುವುದಿಲ್ಲ' ಎಂದನು.

ದೀಪಗಳನ್ನು ಆರಿಸಿ, ಸ್ವಲ್ಪ ಹೊತ್ತಿನ ನಂತರ ಪುನಃ ಬೆಳಕಾಯಿತು. ಸಭಿಕರ ಗಮನವೆಲ್ಲಾ ಟೇಬಲಿನನ ಮೇಲಿರಿಸಿದ್ದ ತಟ್ಟೆಯ ಕಡೆಗೆ ಹೋಯಿತು. ಅಲ್ಲೇನಿದೆ ? ಸರದ ವಿಷಯ ಇರಲಿ, ತಟ್ಟೆಯೂ ಮಂಗಮಾಯವಾಗಿತ್ತು !

# ವಿಶ್ವದಲ್ಲಿ ಈಗಲೂ ನರಭಕ್ಷಕರಿದ್ದಾರೆಯೇ ?

ಒಂದು ಮೀನು, ಇನ್ನೊಂದು ಮೀನನ್ನು ನುಂಗುತ್ತದೆ. ಒಂದು ಜೇಡ ಇನ್ನೊಂದು ಜೇಡವನ್ನು ತಿನ್ನುತ್ತದೆ. ಆದರೆ ಒಬ್ಬ ಮನುಷ್ಯ, ಇನ್ನೊಬ್ಬ ಮನುಷ್ಯನ ಮಾಂಸವನ್ನು ತಿನ್ನುವನೆಂದರೆ ನಂಬಲು ಸಾಧ್ಯವಿಲ್ಲ. ಮನುಷ್ಯನ ಮಾಂಸವನ್ನು ತಿನ್ನುವಂತಹ ಕೆಲವು ಜನ ಈಗಲೂ ಇದ್ದಾರೆ. ಇವರನ್ನು ನರಭಕ್ಷಕರೆಂದು ಕರೆಯುಲಾಗುತ್ತದೆ.

ಪ್ರಾಚೀನ ಕಾಲದಲ್ಲಿ ಮಾನವ ಮಾಂಸವನ್ನು ತಿನ್ನುತ್ತಿದ್ದ ಕೆಲವು ಜನರಿದ್ದರು. ಅದು ತಮಗೆ ಇಷ್ಟವೆಂಬ ಕಾರಣದ ಮೇಲೆ ಅವರು ಅದನ್ನು ತಿನ್ನುತ್ತಿರಲಿಲ್ಲ. ತಾವು ಆಚರಿಸುತ್ತಿದ್ದ ಕೆಲವು ಧಾರ್ಮಿಕ ವಿಧಿಗಳ ಪ್ರಕಾರ, ನರಮಾಂಸವನ್ನು ತಿನ್ನುವುದು ಬಹಳ ಪವಿತ್ರವೆಂದು ಅವರು ಭಾವಿಸಿದ್ದರು. ಒಬ್ಬ ವ್ಯಕ್ತಿ ಮಾಂಸ ತಿನ್ನುವುದರಿಂದ ಆ ಮನುಷ್ಯನ ಉತ್ತಮ ಗುಣಗಳು ತಮಗೆ ಬರುತ್ತವೆಂಬುದು ಆ ಜನರ ನಂಬಿಕೆಯಾಗಿತ್ತು. ಸಿಂಹದ ಮಾಂಸವನ್ನು ತಿಂದರೆ ತಮಗೂ ಸಿಂಹದಷ್ಟು ಶಕ್ತಿ ಮತ್ತು ಧೈರ್ಯಶಾಲಿಯೊಬ್ಬನ ಮಾಂಸವನ್ನು ತಿಂದರೆ ತಮಗೂ ಅಷ್ಟೇ ಧೈರ್ಯ ಬರುತ್ತದೆ ಎಂದು ಅವರು ಭಾವಿಸಿದ್ದರು.

ಕೆಲವು ಬುಡಕಟ್ಟು ಜನಾಂಗದವರಿಗೆ, ಅವರ ಧರ್ಮವೇ ನರಮಾಂಸವನ್ನು ತಿನ್ನಲು ಅವಕಾಶ ಕೊಟ್ಟಿತು. ಕೆಲವು ಜನಾಂಗದವರು, ಅಪರಾಧಿಗಳನ್ನು ದಂಡಿಸುವುದಕ್ಕಾಗಿ ಅವರನ್ನು ದೇವರಿಗೆ ಬಲಿ ಕೊಡುತ್ತಿದ್ದರು. ತನ್ನ ದುಷ್ಕೃತ್ಯಗಳ ಮೂಲಕ, ಅಪರಾಧಿ ದೇವರಿಗೆ ಅಪಚಾರ ವೆಸಗಿದ್ದಾನೆಂದು ಅವರು ಭಾವಿಸುತ್ತಿದ್ದರು. ಅಪರಾಧಿಯನ್ನು ದೇವರಿಗೆ ಬಲಿಕೊಟ್ಟ ಬಳಿಕ, ಅವನ ಮಾಂಸವನ್ನು ಎಲ್ಲರೂ ಹಂಚಿಕೊಂಡು ತಿನ್ನುತ್ತಿದ್ದರು. ಮೆಕ್ಸಿಕೋದ ನರಭಕ್ಷಕ ಪಂಗಡದಲ್ಲಿ ಈ ಪದ್ಧತಿ ಹೆಚ್ಚು ರೂಢಿಯಲ್ಲಿತ್ತು.

ಶಾಂತಸಾಗರ ದ್ವೀಪಗಳ ಕೆಲವು ಬುಡಕಟ್ಟು ಜನರು ಈಗಲೂ ನರಮಾಂಸ ತಿನ್ನುವರು. ನ್ಯೂಗಿನಿಯ ಕೆಲವು ಆಂತರಿಕ ಪ್ರದೇಶಗಳಲ್ಲಿ ನರಮಾಂಸ ತಿನ್ನುವ ಪದ್ಧತಿ ಈಗಲೂ ಇದೆಯೆಂದು ಕೆಲವು ಜನರು ನಂಬಿದ್ದಾರೆ. ಇಡೀ ವಿಶ್ವದಲ್ಲಿ ನರಭಕ್ಷಕರ ಸಂಖ್ಯೆ ಎಷ್ಟಿದೆ ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ, ಪ್ರಾಚೀನ ಕಾಲಕ್ಕೆ ಹೋಲಿಸಿದರೆ, ಇಂದು ಅಂತಹವರ ಸಂಖ್ಯೆ ಅತಿ ಕಡಿಮೆ ಎಂಬುದರಲ್ಲಿ ಸಂದೇಹವಿಲ್ಲ.

---

**ಕೊಡಗು ಸಂಗಾತಿ**

**ಕೊಂಡು ಓದಿರಿ**

---

## ಉನ್ನತ ಶ್ರೇಣಿಯಲ್ಲಿ ಉತ್ತೀರ್ಣ

ಮಂಡ್ಯ ನಗರದ ಸೈಂಟ್ ಥಾಮಸ್ ಕಾನ್ವೆಂಟಿನಲ್ಲಿ ವಿದ್ಯಾರ್ಥಿಯಾದ ಕುಮಾರಿ ಬಬಿತಾ ಹೆಚ್.ಆರ್. ಇವಳು 1996-97ರ ಸಾಲಿನ 7ನೇ ತರಗತಿಯ ಪರೀಕ್ಷೆಯಲ್ಲಿ 93.84./. ಅಂಕ ಗಳಿಸಿ ಶಾಲೆಗೆ ಮೊದಲಿಗಳಾಗಿ ಬಂದಿದ್ದಾಳೆ ಎಂದು ತಿಳಿದು ಬಂದಿದೆ. ಇವಳು ಭಾಗಮಂಡಲದ ಅಮ್ಮುವನ ಲಲಿತ ಅಪ್ಪಚ್ಚು ಮತ್ತು ಶ್ರೀ ರಾಮೇಗೌಡ (ಇಂಜನಿಯರ್, ಜಿಲ್ಲಾ ಪರಿಷತ್‌ಮಂಡ್ಯ) ದಂಪತಿಗಳ ಸುಪುತ್ರಿ.

---

## -: ಚುಟುಕಗಳು :-

ಸರಕಾರಿ ನೌಕರನಿಗೆ ಐದು ದಿನಗಳ ವಾರ
ಈ ನಾಡ ರೈತನಿಗೆ ತುಂಬಾ ಬೇಜಾರ
ಏಳು ದಿನಗಳೂ ದುಡಿದು
ಬೆಳೆಯ ಬೇಕವ ನಿನಗೆ
ಹೊಟ್ಟೆಗೂ, ಬಟ್ಟೆ ಇಲ್ಲದೆಯೇ ತನಗೆ

ಸರ್ಕಾರಿ ನೌಕರಿ ನೀ ಆಗಿಬಿಡು ಬೇಗ
ಅಧಿಕಾರಿಯಾಗು ಬದುಕು ಸರಾಗ
ಸಂಬಳ, ಗಿಂಬಳ, ಭೋನಸ್ಸು, ಭತ್ಯ
ಬಡತನವು ನಿನಗಿಲ್ಲ ಈ ಮಾತು ಸತ್ಯ

ದೇಶದೊಳಗೆಲ್ಲ ರೌಡಿಗಳ ಕಾಟ
ಶಾಲೆ ಕಾಲೇಜುಗಳಲ್ಲಿ ರ್‍ಯಾಗಿಂಗ್ ಆಟ
ದೇವತೆಗಳು ಮೆರೆದ ಈ ನಾಡಿನಲ್ಲಿ
ಶಾಂತಿದೂತರ ಮಾತೆಲ್ಲಾ ಗಾಳಿಯಲ್ಲಿ

ರೈತನ ಮಗನು ಪಟ್ಟಣವ ಸೇರಿ
ಹೊಲಗದ್ದೆಗಳಿಗೆ ಬಡಿಯಿತು ಮಾರಿ
ಬಂಗಾರ ತೆನೆ ಕೊಡುತ್ತಿದ್ದ ಭೂಮಿ
ಕಳೆಗಿಡಗಳ ತಾಣ ಆಯಿತು ಸ್ವಾಮಿ

---

**ಸೂಕ್ತಿ :** "ನೀವು ಮೊದಲು ನಿಮ್ಮನ್ನು ನಿಮ್ಮ ಬದುಕನ್ನು ಪ್ರೀತಿಸಿ"

# ಬಿದಿರು, ಶ್ರೀಗಂಧದ ಕೃಷಿ ಅಗತ್ಯ

ಯಾವ ವ್ಯಕ್ತಿಯ ಮೇಲೂ ಅವಲಂಭಿಸದೆ ಎಲ್ಲೋ ದೂರದ ಬೆಟ್ಟ ಗುಡ್ಡಗಳಲ್ಲಿ ಪ್ರಕೃತಿಯನ್ನು ನಂಬಿ ಯಥೇಚ್ಛವಾಗಿ ಬೆಳೆದು ಕೋಟ್ಯಾಂತರ ಜನರ ಜೀವಿತದಲ್ಲಿ (ತೊಟ್ಟಿಲಿನಿಂದ ಚಟ್ಟದವರೆಗೆ) ಕೊನೆಗೆ ಅವನ ಅಂತ್ಯ ಸಂಸ್ಕಾರದಲ್ಲೂ ನೆರವಾಗುತ್ತಿರುವ ಬಿದಿರಿನ ಬಗ್ಗೆ ಇತ್ತೀಚೆಗೆ ದೂರದರ್ಶನ, ಆಕಾಶವಾಣಿ, ಪತ್ರಿಕೆಗಳು, ರಾಜಕಾರಣಿಗಳು ಮತ್ತು ಲಕ್ಷಾಂತರ ಜನರ ಬಾಯಲ್ಲಿ ದಿನನಿತ್ಯದ ಮಾತಾಗಿದೆ.

ಭಾರತದಲ್ಲಿ ಕೋಟ್ಯಾಂತರ ಜನತೆ ತನ್ನ ಆರಾಧ್ಯ ದೇವರನ್ನು ಪ್ರತಿನಿತ್ಯ ಪೂಜಿಸಲು ಉಪಯೋಗಿಸುವುದು ಅಗರಬತ್ತಿ. ಮನುಷ್ಯನಿಗೆ ಹೇಗೆ ಬೆನ್ನು ಮೂಳೆ ಮುಖ್ಯವೋ ಅದರಂತೆ ಅಗರಬತ್ತಿ ತಯಾರಿಕೆಗೆ ಬಿದಿರು ಕಡ್ಡಿ ಬೇಕೇಬೇಕು.

ಸ್ವಾತಂತ್ರ್ಯ ನಂತರದ ಈ 50 ವರ್ಷಗಳಲ್ಲಿ ನಮ್ಮ ಘನ ಸರ್ಕಾರಗಳು ಮತ್ತು ಸಂಘ ಸಂಸ್ಥೆಗಳು ಮಾಡದ ಕೆಲಸವನ್ನು ಈ ನಿರ್ಜೀವ ಬಿದಿರುಕಡ್ಡಿ ಮಾಡಿ, ದೇಶದಾದ್ಯಂತ ಲಕ್ಷಾಂತರ ಮಹಿಳೆಯರಿಗೆ ಅಗರಬತ್ತಿ ತಯಾರಿಕೆ ಮೂಲಕ ಸ್ವಯಂ ಉದ್ಯೋಗ ಒದಗಿಸಿದೆ.

ಈ ಮಧ್ಯೆ ಒಬ್ಬ ಮಹನೀಯರು ಅಗರಬತ್ತಿ ಉದ್ದಿಮೆಯಲ್ಲಿ ಬಿದಿರು ಕಡ್ಡಿಗೆ ಬದಲಾಗಿ ಬೇರೊಂದು ಪದಾರ್ಥ ಕಂಡು ಹಿಡಿದಿದ್ದಾರೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಇದರಿಂದ ಬೆರಳಲ್ಲಿ ಎಣಿಸುವಷ್ಟು ಕೆಲವು ಉದ್ಯಮಗಳಿಗೆ ಮಾತ್ರ ತಕ್ಕ ಮಟ್ಟಿಗೆ ಸಹಕಾರವಾಗಬಹುದು. ಆದರೆ ಇದರಿಂದ ಲಕ್ಷಾಂತರ ಮಹಿಳಾ ಕಾರ್ಮಿಕರ ಬಾಯಿಗೆ ಮಣ್ಣೇ ಗತಿ, ಇದೇ ರೀತಿ ಈ ಹಿಂದೆ ಒಬ್ಬರು ಗಿಡ ಮೂಲಿಕೆಗಳಿಂದ ಪೆಟ್ರೋಲ್ ತಯಾರಿಸುವುದಾಗಿಯೂ ಪ್ರಚಾರ ಗಿಟ್ಟಿಸಿದ್ದನ್ನು ಜನರು ನೆನೆಯಬೇಕಾಗಿದೆ.

ಸರ್ಕಾರ ನಡೆಸುವವರ ಇಲ್ಲ ಸಲ್ಲದ ಕಾನೂನುಗಳಿಂದ ಇದೇ ದುರವಸ್ಥೆ ಗಂಧದ ಮರಕ್ಕೂ ಬಂದಿದೆ. ಶ್ರೀಗಂಧ ಮತ್ತು ಗಂಧದ ಎಣ್ಣೆ, ಔಷಧಿ, ಸುಗಂಧ ದ್ರವ್ಯಗಳು ಮತ್ತು ಕರಕುಶಲ ವಸ್ತುಗಳಲ್ಲಿ ಉಪಯೋಗವಾಗುತ್ತನೆ. ಶ್ರೀಗಂಧದ ನಾಡಾದ ನಮ್ಮ ರಾಜ್ಯದಲ್ಲಿ ಕೆಲವು ವರ್ಷಗಳ ಹಿಂದೆ ಒಂದು ಕೆ.ಜಿ. ಗಂಧದ ಎಣ್ಣೆ ಬೆಲೆ 250 ರೂಪಾಯಿ ಇತ್ತು. ಆದರೆ ಈಗ 8 ರಿಂದ 10 ಸಾವಿರ ರೂಪಾಯಿ ಕೊಟ್ಟರು ಸಿಗುವುದು ಕಷ್ಟ. ಇಷ್ಟು ದುಬಾರಿ ಹಣ ತೆತ್ತು ತಯಾರಿಸುವ ಪದಾರ್ಥವನ್ನು ಕೊಂಡುಕೊಳ್ಳುವ ಜನರಾದರೂ ಇದ್ದಾರೆಯೇ? ಬೆಲೆ ಕಡಿಮೆ ಇದ್ದಾಗ ವಿದೇಶಗಳಲ್ಲಿ ಶ್ರೀಗಂಧದ ಪದಾರ್ಥಗಳಿಗೆ ಬೇಡಿಕೆ ಸಾಕಷ್ಟಿತ್ತು. ವಿದೇಶೀಯರು ನಮ್ಮ ಗಂಧದೆಣ್ಣೆಯನ್ನು ಮೂಲೆಗೊತ್ತರಿಸಿ, ತಮ್ಮದೇ ಆದ 'ಸಿಂತೆಟಿಕ್ ಸ್ಯಾಂಡಲ್' ಕಂಡು ಹಿಡಿದಿದ್ದಾರೆ.

ನಮ್ಮ ಪ್ರಾಂತ್ಯದಲ್ಲಿ ಗಂಧದ ಎಣ್ಣೆ ತಯಾರಿಸುತ್ತಿದ್ದ ಮೈಸೂರು, ಶಿವಮೊಗ್ಗ ಕಾರ್ಖಾನೆಗಳು ಮುಚ್ಚುವ ಸ್ಥಿತಿಗೆ ಬಂದಿದೆ. ಇದಕ್ಕೆಲ್ಲಾ ಮೂಲ ಕಾರಣವಾದರೂ ಏನು? ಶ್ರೀಗಂಧ, ನಮಗೆ ಖುಶಿ ಬಂದಾಗ ಅಂಗಡಿಗೆ ಹೋಗಿ ಹಣ ಕೊಟ್ಟರೆ ಸಿಗುವ ಪದಾರ್ಥವಲ್ಲ. ಇದರ ಗಿಡ ನೆಟ್ಟ ನಂತರ, ಮರವಾಗಿ ಬೆಳೆದು ಫಲ ಕೊಡಬೇಕಾದರೆ ಕಡೇ ಪಕ್ಷ 40 ವರ್ಷಗಳಾದರೂ ಬೇಕೆಂದು ಹೇಳುತ್ತಾರೆ. ಅಂದ ಮೇಲೆ ನಾವೆಷ್ಟು ಇದನ್ನು ಬೆಳೆಸುತ್ತಿದ್ದೇವೆ. ಆಕಸ್ಮಾತ್ ಯಾರದಾದರೂ ಮನೆಯ ಹತ್ತಲಿನಲ್ಲಿ ಅಥವಾ ಹೊಲ ತೋಟದಲ್ಲಿ ಒಂದು ಗಂಧದ ಗಿಡ ತಾನಾಗಿ ಬೆಳೆದಿದ್ದರೆ, 'ನಮ್ಮ ಜಮೀನಿನಲ್ಲಿ ಗಂಧದ ಗಿಡ ಇರುವುದು ಜೇಬಿನಲ್ಲಿ ನಾಗರ ಹಾವು ಇದ್ದಂತೆ' ಎಂದು ಭಾವಿಸಿ, ಕೂಡಲೆ ಆ ಗಿಡವನ್ನು ಬುಡ ಸಮೇತ ಆತ ಕಿತ್ತು ಹಾಕುತ್ತಾನೆ. ಇದು ಏತಕ್ಕೆ? ಸರ್ಕಾರದ ಕಾನೂನಿನ ಭಯವೇ ಇದಕ್ಕೆ ಕಾರಣವಾಗಿದೆ.

ನಮ್ಮ ದೇಶದಲ್ಲಿ ಬಿದಿರು, ಶ್ರೀಗಂಧ ಇತ್ಯಾದಿ ಉತ್ತಮ ಗಿಡ ಮರಗಳನ್ನು ಬೆಳೆಯಬಹುದಾದ ಲಕ್ಷಾಂತರ ಏಕರೆ ಬಂಗಾರದಂಥಹ ಭೂಮಿ ಇದೆ. ಇದನ್ನು ನೆಟ್ಟು ಬೆಳೆಸಬಹುದಾದಂತಹ ಲಕ್ಷಾಂತರ ರೈತ ಬಾಂಧವರೂ ಇದ್ದಾರೆ. ಇವೆರಡನ್ನು ಸದ್ವಿನಿಯೋಗನಡಿಸಿಗೊಳ್ಳುವಂತ ಸರ್ಕಾರದ ಕ್ರಮ ಬಹು ಅತ್ಯಗತ್ಯ.

ಮುಂಜ್ಞಾಂಡ್ರ ಕೆ. ತಮ್ಮಯ್ಯ

## ಕ್ರೆಡಿಟ್ ಕಾರ್ಡ್‌ಗೆ ಕಿಮ್ಮತ್ತು

ಕ್ರೆಡಿಟ್ ಕಾರ್ಡ್‌ಗಳ ಸಂಖ್ಯೆ ದಿನದಿಂದ ದಿನಕ್ಕೆ ವೇಗವಾಗಿ ಬೆಳೆಯುತ್ತಿದೆ. 1996ರಲ್ಲಿ ಭಾರತದಲ್ಲಿ ಮಾಸ್ಟರ್ ಕಾರ್ಡ್ ಸಂಖ್ಯೆ 13 ಲಕ್ಷ ದಾಟಿತು. ಈ ಕಾರ್ಡ್‌ಗಳ ಮೂಲಕ 41 ಕೋಟಿ ಡಾಲರ್‌ಗಳಷ್ಟು ವಹಿವಾಟು ನಡೆಯಿತು.

**ಕಾಡು ಬೆಳೆಸಿ ನಾಡು ಉಳಿಸಿ**
**ಮನೆಗೊಂದು ಮಗು**
**ಕೇರಿಗೊಂದು ಶಾಲೆ**

## ನಮ್ಮ ಕಾಲೇಜು

ನಮ್ ಕಾಲೇಜು ಮಹಾರಾಣಿ ಕಾಲೇಜು
ಇಲ್ಲಿ ಓದೋರಿಗೆಲ್ಲಾ ಇನ್ನು ಟೀನೇಜು
ಪರೀಕ್ಷೆಯಲ್ಲಿ ಬರೆಯುವರು ಪೇಜು ಪೇಜು
ಓದಲು ಬಲು ಮೋಜು

ಬರ್ತಾರೆ ಹುಡ್ಗೀರು ಜಂಭದ ಬ್ಯಾಗೊನ್ನಿಡ್ಕಂಡು
ನಡಿತಾರೆ ಹೈ ಹೀಲ್ಡ್ ಸ್ಲಿಪ್ಪರ್ ಹಾಕ್ಕೊಂಡು
ಆದರೆ ಕಾಲೇಜಿಗೆ ಬರುತ್ತಾರೆ ತಲೆ ತಗ್ಗಿಸಿಕೊಂಡು

ಕುಳಿತುಕೊಳ್ಳುತ್ತಾರೆ ಕಲ್ಲು ಬೆಂಚಲ್ಲಿ
ತಿಂಡಿ ತಿಂತಾರೆ ಅರ್ಧಂಭರ್ಧ ಚೆಲ್ಲಿ
ಮಾತಾಡುತ್ತಿರುತ್ತಾರೆ ಯಾವ ಪಿಚ್ಚರ್ ಬಂದಿದೆ ಎಲ್ಲೆಲ್ಲಿ

ಇದ್ದಾರೆ ನಮ್ ಹುಡ್ಗೀರು ಬ್ಯೂಟಿಯಾಗಿ
ಬರ್ತಾರೆ ಕಾಲೇಜಿಗೆ ಠಾಕುಠೀಕಾಗಿ
ಡ್ಯಾಶ್ ಹೊಡಿತಾರೆ ಜೋರಾಗಿ
ಸ್ವಾರಿ ಕೇಳೋಕೆ ಬದಲಾಗಿ ಬೈತಾರೆ ಚೆನ್ನಾಗಿ

ಬರ್ತಾರೆ ಬೆಳಗ್ಗೆ ಸ್ನೋ ಪೌಡರ್ ಹಾಕ್ಕೊಂಡು
ಮಧ್ಯಾಹ್ನ ಹೊರಡ್ತಾರೆ ಪೆಚ್ಚು ಮೊರೆ ಮಾಡ್ಕೊಂಡು
ಅಯ್ಯೋ ಈಗ ಹೋಗಬೇಕಲ್ಲ, ಬಸ್ಸಲ್ಲಿ ನೇತಾಡಿಕೊಂಡು
ಇದು ನಮಗೆ ದಿನಾ ಇದ್ದದ್ದೇ ಗೋಳು ಎಂದ್ಕೊಂಡು

● ಪಟ್ಟಡ ಎಸ್. ಹರಿಣಾಕ್ಷಿ
ದ್ವಿತೀಯ ಬಿ.ಎ., ಮೈಸೂರು.

## ಬೆಳಗುವ ಜಾಹೀರಾತು ಬೋರ್ಡ್‌ಗಳು

ರಾತ್ರಿ ವೇಳೆ, ನಗರದ ಪೇಟೆಗಳಲ್ಲಿ ಜಾಹೀರಾತು ಬೋರ್ಡ್‌ಗಳು ಎಲ್ಲೆಲ್ಲೂ ಜಗಮಗಿಸುತ್ತವೆ. ನಾನಾ ಬಣ್ಣಗಳಲ್ಲಿರುತ್ತವೆ. ಈ ಫಲಕಗಳ ಪ್ರಕಾಶ ಹಾಗೂ ಸೌಂದರ್ಯ ಮನ ಸೆಳೆಯುತ್ತವೆ. ಈ ಜಾಹೀರಾತು ಬೋರ್ಡ್‌ಗಳ ಆಕರ್ಷಕ ಬಣ್ಣಗಳು ಹೇಗೆ ಉತ್ಪತ್ತಿಯಾಗುತ್ತವೆ, ನಿಮಗೆ ಗೊತ್ತೆ ?

ಗ್ಯಾಸ್ ಮೂಲಕ ವಿದ್ಯುಚ್ಛಕ್ತಿ ಪ್ರವಹಿಸಿ, ಉಂಟಾಗುವ ಬೆಳಕಿನಿಂದ ಈ ಬೋರ್ಡ್‌ಗಳು ಹೊಳೆಯುತ್ತವೆ. ಈ ಬೋರ್ಡ್‌ಗಳಲ್ಲಿ ಪ್ರದರ್ಶಿಸಲಾಗುವ ಅಕ್ಷರಗಳು ತೆಳುವಾದ ಗಾಜಿನ ಟ್ಯೂಬ್‌ಗಳಿಂದ ರಚಿತವಾಗುತ್ತವೆ. ಬಿಸಿ ಗಾಜಿನ ಟ್ಯೂಬ್‌ಗಳನ್ನು ಯಾವ ಆಕಾರಕ್ಕೆ ಬೇಕಾದರೂ ಬಗ್ಗಿಸಬಹುದೆಂಬುದು ನಿಮಗೆ ಗೊತ್ತಿದೆ. ಈ ಗಾಜಿನ ಟ್ಯೂಬ್‌ನಿಂದ ಜಾಹೀರಾತಿಗೆ ಬೇಕಾದ ಅಕ್ಷರಗಳನ್ನು ರಚಿಸಲಾಗುತ್ತದೆ. ಅವುಗಳ ಜೊತೆಗೆ ಲೋಹದ ಎಲೆಕ್ಟ್ರೋಡ್‌ಗಳ ಫ್ಯೂಸ್‌ಗಳನ್ನು ಹಾಕಲಾಗುವುದು. ವ್ಯಾಕ್ಯೂಂಪಂಪ್‌ಗಳ ಮೂಲಕ ಈ ಟ್ಯೂಬ್‌ಗಳೊಳಗಿರುವ ಗಾಳಿಯನ್ನು ಹೊರ ತೆಗೆಯಲಾಗುವುದು. ಅನಂತರ ಅವುಗಳಿಗೆ ನಿಯಾನ್ ಅಥವಾ ಆರ್ಗಾನ್ ಗ್ಯಾಸ್‌ಗಳನ್ನು ತುಂಬಿಸಲಾಗುವುದು. ಈ ಎಲೆಕ್ಟ್ರೋಡ್‌ಗಳಿಗೆ, ಉನ್ನತ ವೋಲ್ಟೇಜ್ ಹರಿಸಿದಾಗ, ಗ್ಯಾಸ್‌ನೊಳಗೆ ವಿದ್ಯುತ್ ಹರಿದು ಬಣ್ಣದ ಬೆಳಕು ಉಂಟಾಗುತ್ತದೆ. ಈ ಬೆಳಕಿನಿಂದಾಗಿ ಅಕ್ಷರಗಳು ಬೆಳಗುತ್ತವೆ.

ಜಾಹೀರಾತಿನ ಅಕ್ಷರಗಳ ಬಣ್ಣ, ಆ ಅಕ್ಷರಗಳ ಟ್ಯೂಬ್‌ನೊಳಗೆ ತುಂಬಿರುವ ಗ್ಯಾಸ್‌ನ್ನು ಅವಲಂಬಿಸಿರುತ್ತದೆ. ನಿಯಾನ್ ಗ್ಯಾಸನ್ನು ತುಂಬಿದರೆ, ಅಕ್ಷರಗಳು ಕೆಂಪು ಬಣ್ಣದಿಂದ ಬೆಳಗುತ್ತವೆ. ಆರ್ಗಾನ್ ಟ್ಯೂಬ್‌ಗೆ ತುಂಬಿಸಿದರೆ, ಅಕ್ಷರಗಳು ಹಸಿರು ಬೆಳಕಿನಿಂದ ಬೆಳಗುತ್ತವೆ. ಇದೇ ರೀತಿ ನೀಲಿ, ಕೆಂಪು ಗಾಜಿನ ಟ್ಯೂಬ್‌ಗಳಿಗೆ ಆರ್ಗಾನ್, ನಿಯಾನ್ ಮತ್ತು ಮರ್ಕ್ಯುರಿ ವೇಪರ್ ತುಂಬಿಸಿದರೆ ಫಲಕ ಅಕ್ಷರಗಳಿಗೆ ನೀಲಿ ಬಣ್ಣ ಇರುತ್ತದೆ. ಇತರ ಬಣ್ಣಗಳನ್ನುಂಟು ಮಾಡಲು, ವಿವಿಧ ಗ್ಯಾಸ್‌ಗಳನ್ನು ಮಿಶ್ರ ಮಾಡಲಾಗುವುದು. ಗಿರಾಕಿಗಳ ಮನಸ್ಸನ್ನಾಕರ್ಷಿಸಲು ವ್ಯಾಪಾರಿಗಳು ಇಂತಹ ಆಕರ್ಷಕ ಜಾಹೀರಾತು ಬೋರ್ಡ್‌ಗಳ ಪ್ರಯೋಜನ ಪಡೆಯುವರು.

## ಹರಿಸೇವೆ

ದಿನಾಂಕ 21-5-97ನೇ ಬುಧವಾರ ಭಾಗಮಂಡಲ ನಾಡು ಚೇರಂಗಾಲ ಗ್ರಾಮದ ಕೋಡಿ ಕುಟುಂಬಸ್ಥರ ಹರಿಸೇವೆಯು ಕೋಡಿ ಕುಟುಂಬದ ಐನ್ ಮನೆಯಲ್ಲಿ ನಡೆಯಿತು.

ಬಲ್ಲ ಮಾವಟ ಗ್ರಾಮದಲ್ಲಿ ಎಡಿಕೇರಿ ಕುಟುಂಬಸ್ಥರ ಹರಿಸೇವೆಯು ದಿನಾಂಕ 22-5-97 ರ ಗುರುವಾರ ಎಡಿಕೇರಿ ಶ್ರೀ ಗೋಪಾಲನವರ ಮನೆಯಲ್ಲಿ ನಡೆಯಿತು ಎಂದು ತಿಳಿದು ಬಂದಿದೆ. – ಪೊನ್ನೇಟಿ ಸುನಿಲ್

ಮಹಿಳಾ ಸಮಾಜವು ಇಂದಿನ ಬೆಳವಣಿಗೆಗೆ ಅತ್ಯಾವಶ್ಯಕ

# ಅಭಿವೃದ್ಧಿಯ ಹಾದಿಯಲ್ಲಿ ಮಾದರಿ ಗೌಡ ಮಹಿಳಾ ಸಮಾಜವಾಗಿ

# ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಮಾಜ

"ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ" ಸಮಾಜ ಬೆಂಗಳೂರಿನ ಗಂಗಾನಗರ ದಲ್ಲಿದೆ, ಇದರ ಪ್ರಗತಿ ತುಂಬ ಉತ್ತಮ ಮಟ್ಟದಲ್ಲಿದ್ದು, ಸಂಘಟನೆ ಅಷ್ಟೆ ಸುಲಲಿತವಾಗಿದೆ. ಇಂದು ಗೌಡ ಜನಾಂಗದ ಸಂಘ ಸಂಸ್ಥೆಗಳಲ್ಲಿ ಈ ಮೇಲಿನ ಸಂಘ ತುಂಬ ಲಾಭದಾಯಕವು, ಮುಂದಿನ ಪೀಳಿಗೆಗೆ ಮಾರ್ಗದರ್ಶನವು ಆಗಿದೆ. ಹೀಗಿರುವಾಗ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ" ಸಮಾಜದ ಆಶ್ರಯದಲ್ಲಿ ಮಹಿಳಾ ಸಮಾಜ ತಲೆ ಎತ್ತಿ ಅತೀ ಅಲ್ಪಾವಧಿಯಲ್ಲಿ ಸಾಧನೆಯನ್ನು ಗೈದಿದೆ. 'ಸಂಗಾತಿ' ಇದರ ಅಧ್ಯಕ್ಷಿಣಿಯವರನ್ನು ಮಾತನಾಡಿಸಿದಾಗ ಕೆಲವು ವಿವರಗಳನ್ನು ನಮಗೆ ನೀಡಿದ್ದಾರೆ.

ಅಧ್ಯಕ್ಷಿಣಿಯಾಗಿ ಪೂಜಾರಿ ತಾರಾ ಪೂವಯ್ಯ ಮತ್ತು ಕಾರ್ಯದರ್ಶಿಯಾಗಿ ಟಿ.ಜೆ. ಲತಾ ಇವರೊಂದಿಗೆ ಹೆಗಲು ಕೊಟ್ಟು ಉಳಿದ ಕಾರ್ಯಕಾರಿಣಿ ಸಮಿತಿ 9 ಜನರನ್ನು ಒಳಗೊಂಡಿದೆ. ಈ ಮಹಿಳಾ ಸಂಘಟನೆಯನ್ನು ಹುಟ್ಟುಹಾಕಬೇಕಾದರೆ ಅತಿ ನುರಿತ, ಚಟುವಟಿಕೆಯ ವ್ಯಕ್ತಿಯೊಬ್ಬರು ಕಾರಣರಾದರು. ಅವರೆ ನಮ್ಮ ಹಿರಿಯರು, ನಮಗೆಲ್ಲಾ ಚಿರಪರಿಚಯಸ್ಥರಾದ ಶ್ರೀ ಪೂಜಾರಿ ಮೊಣ್ಣಪ್ಪನವರು. ಇವರು ಬೆಂಗಳೂರಿನ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ" ಸಮಾಜದ ಅಧ್ಯಕ್ಷರು.

ಸಂಗಾತಿ : ನಿಮ್ಮ ಮಹಿಳಾ ಸಂಘಟನೆ ಎಷ್ಟು ಸಮಯದಿಂದ ಕಾರ್ಯನಿರ್ವಹಿಸುತ್ತಿದೆ ?

ಉ : ಸುಮಾರು ಒಂದು ವರ್ಷದ ಹಿಂದೆ ತಲೆ ಎತ್ತಿದ ನಮ್ಮ ಸಮಾಜ, ಶ್ರೀ ಪೂಜಾರಿ ಮೊಣ್ಣಪ್ಪನವರ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿದೆ.

ಸಂಗಾತಿ : ನಿಮ್ಮ ಸಮಾಜ ಮಹಿಳೆಯರಿಗಾಗಿ ಏನೇನು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ ?

---

**ಒಬ್ಬ ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆಯ ಸಹಕಾರ ಇದ್ದೆ ಇರುತ್ತದೆ. ಹೀಗಿರುವಾಗ ಸಂಘ ಸಂಸ್ಥೆಗಳು ಸ್ಥಾಪನೆಯಾದಾಗ ಅಲ್ಲಿ ಮಹಿಳೆಯರಿಗೆ ಸ್ಥಾನ ಮಾನ ದೊರೆತಾಗ ಅದು ಬಲಿಷ್ಠಗೊಳ್ಳುವುದರಲ್ಲಿ ಸಂಶಯವಿಲ್ಲ. ಉದಾಹರಣೆಯಾಗಿ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಆಶ್ರಯದಲ್ಲಿ ಮೊಳಕೆ ಚಿಗುರುತ್ತಿರುವ ಮಹಿಳಾ ಸಮಾಜದ ಬಗ್ಗೆ ಇಲ್ಲಿ ಉಲ್ಲೇಖಿಸಲಾಗಿದೆ. – ಸಂ.**

---

ಉ : ಮೊದಲನೆಯದಾಗಿ ಹೊಲಿಗೆಯನ್ನು ಹೇಳಿಕೊಡುತ್ತಿದ್ದೇನೆ. ನಾವು ನಮ್ಮದೇಯಾದ ಕೆಲವು ಹೊಲಿಗೆ ಯಂತ್ರಗಳನ್ನು ಹೊಂದಿದ್ದೇವೆ. ಇಲ್ಲಿ ತರಗತಿಗಳನ್ನು ಏರ್ಪಡಿಸಿ ಇಚ್ಚೆಯುಳ್ಳ ಮಹಿಳೆಯರಿಗೆ ಹೊಲಿಗೆಯಲ್ಲಿ ತರಬೇತಿಯನ್ನು ಕೊಡಲಾಗುತ್ತಿದೆ. ಈ ತರಬೇತಿಗಳು 6 ತಿಂಗಳಿಗೊಮ್ಮೆ ಒಂದೊಂದು ಗುಂಪುಗಳಾಗಿ ಮಾಡಿ ಅದರಲ್ಲಿ ಪರಿಣತಿ ಹೊಂದಿದ ನಂತರ ದೃಢೀಕರಣ ಪತ್ರಗಳನ್ನು ನಮ್ಮ ಸಂಘದಿಂದ ನೀಡಲಾಗುತ್ತದೆ. ಇದರಿಂದ ಮಹಿಳೆಯರು ತಮ್ಮ ಸ್ವಂತ ಕಾಲ ಮೇಲೆ ನಿಂತುಕೊಳ್ಳಲು ಅಥವಾ ಮನೆಯಲ್ಲಿಯೇ ಹೊಲಿಗೆ ಮಾಡಲು ಸಹಾಯವಾಗುತ್ತದೆ. ನಂತರ ಉಪ್ಪಿನಕಾಯಿ, ಬ್ರೆಡ್, ಸಿಹಿತಿಂಡಿ, ಹಪ್ಪಳ ತಯಾರಿಕೆಯಲ್ಲಿ ತರಗತಿಗಳನ್ನು ಹಮ್ಮಿಕೊಳ್ಳುವ ಅಭಿಪ್ರಾಯವು ನಮ್ಮಲ್ಲಿದೆ.

---

ಸಂದರ್ಶನ : **ಕಟ್ರತನ ಜಯರಾಂ**

ಸಂಗಾತಿ : ಈ ತರಹದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ನಿಮಗೆ ಧನ ಮತ್ತು ಇನ್ನಿತರೆ ಸಹಾಯಗಳು ದೊರೆಯುತ್ತಿವೆಯೆ ?

ಉ : ಹೌದು, ದೊರೆತಿದೆ. ಮುಖ್ಯವಾಗಿ ನಮಗೆ ಬೆನ್ನೆಲುಬಾಗಿ ನಿಂತವರು ಬೆಂಗರಿನ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ". ಇವರಿಂದ ತರಗತಿ ನಿರ್ವಹಿಸುವ ಉಪಾಧ್ಯಾಯಿನಿಗೆ ಸಂಬಳ ನೀಡಲಾಗುತ್ತಿದೆ. ನಮಗೆ ಹೊಲಿಗೆ ಯಂತ್ರವನ್ನು ಹೊಂದಿಸಿಕೊಟ್ಟವರು, ಬೆಂಗಳೂರಿನ ರೋಟರಿ ಸಂಸ್ಥೆಯವರು. ಜೊತೆಗೆ ಈಗ ಸರಕಾರದ ವತಿಯಿಂದ ಧನ ಸಹಾಯ ಬರುವ ನಿರೀಕ್ಷೆಯಿದೆ. ಇದಕ್ಕಾಗಿ ಸರ್ಕಾರದ ಪರವಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ನಿಧಿ ಎಂಬ ಕಛೇರಿಯಿಂದ ತಪಾಸಣೆ ನಡೆದಿದೆ. ಇವರಿಂದ ಉತ್ತಮವಾದ ಸಹಾಯ ದೊರೆತರೆ ಅದರಿಂದ ನಮಗೆ ಗಜ ಬಲ ಬರಬಹುದು.

ಸಂಗಾತಿ : ನಿಮಗೆ ಇದಕ್ಕಾಗಿ ಸ್ವಂತ ಕಟ್ಟಡ ಇದೆಯೆ ?

ಉ : ಕಟ್ಟಡ ಕಟ್ಟುತ್ತಿದ್ದಾರೆ. ಅದು ಪೂರ್ಣ ಹಂತದಲ್ಲಿದೆ. 'ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ' ವತಿಯಿಂದ ಅವರದೆಯಾದ ಕಟ್ಟಡದ 2ನೇ ಅಂತಸ್ತನ್ನು ನಮಗೆ ಬಿಡ್ಡುಕೊಡುವಂತೆ ತೀರ್ಮಾನವಾಗಿದೆ. ಅದಕ್ಕೆ ನಾವು ಬಾಡಿಗೆ ರೂಪದಲ್ಲಿ ಹಣ ಸಂದಾಯ ಮಾಡಬೇಕಿದೆ ಇದು ವಿಶಾಲವಾದ ಕೊಠಡಿಯನ್ನು ಒಳಗೊಂಡಿದೆ.

ಸಂಗಾತಿ : ವಿಶಾಲವಾದ ಕೊಠಡಿ ಎಂದಿರಲ್ಲಾ, ಈ ವಿಶಾಲವಾದ ಕೊಠಡಿಯಲ್ಲಿ ಇನ್ನೂ ಉತ್ತಮ ಕಾರ್ಯಕ್ರಮ ಹಮ್ಮಿಕೊಳ್ಳಬಹುದಲ್ಲಾ ?

ಉ : ಹೌದು, ಅದರಲ್ಲಿ ಗುಡಿ ಕೈಗಾರಿಕೆ (Small Scale Industry) ಗೆ ಸಂಬಂಧ ಪಟ್ಟ ತರಬೇತಿಗಳನ್ನು ಹೇಳಿಕೊಡುವ ಅಭಿಪ್ರಾಯವಿದೆ. ಮುಖ್ಯವಾಗಿ ಕಂಪ್ಯೂಟರ್‌ಗೆ ಸಂಬಂಧಪಟ್ಟದ್ದಾಗಿರುತ್ತದೆ. ತರಗತಿಗಳು ಬೆಳಿಗ್ಗೆ 10 ರಿಂದ 1 ಗಂಟೆ ತನಕನಡೆಯುತ್ತವೆ.

ಸಂಗಾತಿ : ನೀವೊಬ್ಬ ಗೃಹಣಿಯಾಗಿ ಈ ಸಮಾಜದಲ್ಲಿ ನಿಮ್ಮ ಸಮಯವನ್ನು ಹೇಗೆ ತೊಡಗಿಸಿಕೊಂಡಿದ್ದೀರ ?

ಉ : ನಾನೊಬ್ಬ ಗೃಹಣಿಯಾದರು ನನ್ನ ಮನೆಯವರೆಲ್ಲರ ಸಹಕಾರದಿಂದ ಸಿಗುವ ಸ್ವಲ್ಪ ಸಮಯದಲ್ಲಿ ನನ್ನನ್ನು ನಾನು ಸಮಾಜ ಸೇವೆಯಲ್ಲಿ ತೊಡಗಿಸಬೇಕೆಂಬ ಬಯಕೆಯಿಂದ ನಾನು ಇಲ್ಲಿಗೆ ಬರಬೇಕಾಯಿತು. ನನ್ನ ಪತಿಯವರಾದ ಪೂವಯ್ಯನವರು Indian Navyಯಲ್ಲಿ 18ವರ್ಷದ ಸೇವೆಯ ನಂತರ CIWE ನಲ್ಲಿ ಸ್ಟೋರ್ ಆಫೀಸರ್ ಆಗಿ ನಿವೃತ್ತಿಹೊಂದಿದ್ದಾರೆ. ಇವರ ಸಂಪೂರ್ಣ ಸಹಾಯ ನನಗೆ ದೊರೆತ್ತಿದೆ.

ಸಂಗಾತಿ : ನಿಮ್ಮ ಮಕ್ಕಳ ಸಹಕಾರ ದೊರೆತಿದೆಯೇ ?

ಉ : ನನಗೆ ಇಬ್ಬರು ಗಂಡು ಮಕ್ಕಳು. ಇವರ ಸಂಪೂರ್ಣ ಸಹಕಾರ ದೊರೆತಿದೆ. ಮೊದಲನೇ ಮಗನಾದ ತಿಮ್ಮಯ್ಯ "ಡೆಕ್ಕನ್ ಹೆರಾಲ್ಡ್" ಪತ್ರಿಕೆಯಲ್ಲಿ ಉಪ ಸಂಪಾದಕ, M. A. ನಲ್ಲಿ ಗೋಲ್ಡ್ ಮೆಡಲ್ ಪಡೆದಿದ್ದಾನೆ. ಈಗ Ph.D.ಗೆ ಓದು ಮುಂದುವರಿಸಿದ್ದಾನೆ. ಎರಡನೇ ಮಗನಾದ ತಿಲಕ್, B.Sc. ನಂತರ 2 ವರ್ಷದ ಕಂಪೂಟರ್ ಡಿಪ್ಲೊಮೊ ಮಾಡುತ್ತಿದ್ದಾನೆ.

ತಾರಾರವರು PUC ಯನ್ನು 1965-66 ರಲ್ಲಿ ಮುಗಿಸಿದರು. ಬೇಕರಿಗೆ ಸಂಬಂಧಪಟ್ಟ ಹಾಗೆ ತರಬೇತಿಯನ್ನು ಪಡೆದಿದಾರ್ರೆ. ಇವರ ಜನನ ಮಡಿಕೇರಿಯ ಹತ್ತಿರದ ಕಗ್ಗೋಡಿನಲ್ಲಿ ಆಯಿತು. ಇವರ ತಂದೆ ಕಾಫಿ ಪ್ಲಾಂಟರ್ ಪುಳಂಜನ ತಿಮ್ಮಯ್ಯ, ತಾಯಿ ಬೊಳ್ಳಮ್ಮ.

ಮಹಿಳೆಯರಿಗೆ ಆದರ್ಶವಾಗಬಲ್ಲ ಬೆಂಗಳೂರಿನ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ" ಸಮಾಜದ ವತಿಯಲ್ಲಿ ನಡೆಯುತ್ತಿರುವ ಮಹಿಳಾ ಸಮಾಜ ಅತೀ ಶೀಘ್ರದಲ್ಲಿ ಬೆಳವಣಿಗೆ ಸಾಧಿಸುತ್ತಿದೆ. ಅದರಂತೆ ಮಡಿಕೇರಿಯಲ್ಲಿ ಮತ್ತು ಮೈಸೂರಿನಲ್ಲಿರುವ ಸಮಾಜಗಳಲ್ಲಿ ಮಹಿಳೆಯರು ಮುಂದೆಬಂದು ಮಹಿಳಾಸಮಾಜ ಸ್ಥಾಪನೆ ಮಾಡಲು ಅವಕಾಶಗಳಿದ್ದರು ಸಹ ಏಕೆ ಮುಂದೆ ಬರುತ್ತಿಲ್ಲ ಎಂಬುದು ಯಕ್ಷ ಪ್ರಶ್ನೆಯಾಗಿಯೇ ಉಳಿದಿದೆ. ಹೇಗೆ ಇರಲಿ ಬೆಂಗಳೂರಿನಲ್ಲಿ ಮಹಿಳೆಯರ ಪರವಾಗಿ ಸಹ ಮನೋಭಾವದ ಚಟುವಟಿಕೆಯ ಮಹಿಳೆಯಾಗಿ ತಾರಾರವರು ಇಟ್ಟಿರುವ ಹೆಜ್ಜೆಗೆ ಹೆಜ್ಜೆ ಇಟ್ಟು ಎಲ್ಲಾ ಹಂತದಲ್ಲಿಯೂ ಸಹಕಾರ ನೀಡುತ್ತಿರುವ ಉಳಿದ ಸದಸ್ಯ ವೃಂದಕ್ಕೆ ಯಶಸ್ಸು ಕಾಣಲಿ ಎಂದು "ಕೊಡಗು ಸಂಗಾತಿ" ಪರವಾಗಿ ನಮನಗಳನ್ನು ಸಲ್ಲಿಸುತ್ತೇವೆ.

— ಪೂಜ್ಯರ ಸವಿನೆನಪು —

**ದಿ॥ ಪಟ್ಟಡ ಕಾರ್ಯಪ್ಪ ಮುತ್ತಣ್ಣ**

**(12-5-1905 — 29-5-1986)**

ನೀವು ದಿನಾಂಕ 29-5-1986 ರಲ್ಲಿ ಕಾಲಕಂಡು ಕಾರೋಣರಾಗಿ ಇಂದಿಗೆ 11 ವರ್ಷಗಳೇ ಸಂದವು. ನೀವು ನಮಗೆ ದಾರಿ ದೀಪವಾಗಿ ಬೆಳಕನ್ನು ನೀಡುತ್ತಾ, ನೆನೆದಾಗ ಕೈ ಹಿಡಿದು ಮುನ್ನಡೆಸುತ್ತಿದ್ದೀರಿ. ನಮ್ಮ ಹೃದಯದಲ್ಲಿ ಅನುದಿನವು ನೆಲೆಸಿರುವ ನೀವು ಇಂದು ನಮ್ಮೆಲ್ಲರನ್ನು ಹರಸು ತಂದೆ.

ಶ್ರೀ ಪಟ್ಟಡ ಉಲ್ಲಾಸ, ಸುಜಾತ ಮತ್ತು ಮಕ್ಕಳು
ಶ್ರೀ ಪಟ್ಟಡ ಪ್ರಭಾಕರ, ಶೀಲಾಮಣಿ ಮತ್ತು ಮಕ್ಕಳು
ಶ್ರೀ ಪಟ್ಟಡ ತಿಮ್ಮಯ್ಯ, ರುಕ್ಮಿಣಿ ಮತ್ತು ಮಕ್ಕಳು
ಶ್ರೀಮತಿ ಜ್ಯೋತಿ ರವಿಕುಮಾರ್ ಮತ್ತು ಯಶಸ್ವಿನಿ

# ನಿಮ್ಮ ಪತ್ರಗಳು -

## ಸಂಗಾತಿಗೆ ವಂದನೆಗಳು

ಮಾನ್ಯರೆ,

ಈ ರಜಾ ಅವಧಿಯಲ್ಲಿ ನನ್ನ ಕೈಗೆ ತಲುಪಿದ ಕೊಡಗು ಸಂಗಾತಿ ಓದಿ ನೋಡಿ ಹೇಳಲಾರದಷ್ಟು ಸಂತೋಷವಾಯಿತು. ನಾನು ಅಷ್ಟು ವಿದ್ಯಾವಂತ, ಬರಹಗಾರನಲ್ಲದಿದ್ದರೂ ನನ್ನ ಕೈಲಾದ ಸಹಾಯ ಖಂಡಿತ ಈ ಪತ್ರಿಕೆಏಳಿಗೆಗೆ ಮಾಡಬೇಕು ಅನ್ನುವ ಒಂದು ನಿರ್ಧಾರ ಹುಟ್ಟಿ ಬಂತು. ನಾನು ನಿಜವಾಗಿ ನಿಮ್ಮೆಲ್ಲರಿಗೂ ನಮ್ಮ ಗೌಡ ಜನಾಂಗದ ಪರವಾಗಿ ಹೃತ್ಪೂರ್ವಕ ವಂದನೆಗಳು.

ಇತಿ ನಿಮ್ಮ ಪತ್ರಿಕೆಯ ಆಸಕ್ತ ಓದುಗಾರ,
**ಹುಲಿಮನೆ ಹರೀಶ್ ಕುಮಾರ್,**
ಏರ್ ಡಿಫೆನ್ಸ್ ರಿಜಿಮೆಂಟ್,
C/o 56 ಎ. ಪಿ. ಓ.

## ಅರ್ಧಭಾಗ ಅರೆಭಾಷೆಗೆ ಮೀಸಲಿಡಿ

"ಕೊಡಗು ಸಂಗಾತಿ" 1 ಮತ್ತು 2ನೇ ಸಂಚಿಕೆಗಳನ್ನು ನೋಡಿದೆ. ಅರೆಭಾಷೆಯನ್ನು ಹಿಂದೊಮ್ಮೆ "ಗೌಡ ಧ್ವನಿ" ಪತ್ರಿಕೆಯಲ್ಲಿ ಓದಿದ್ದೆ, ಮತ್ತೆ ಓದುವ ಅವಕಾಶ ಇದೀಗ ದೊರೆತಿದೆ.

ಪತ್ರಿಕೆಯಲ್ಲಿ ಅರ್ಧಭಾಗವನ್ನು ಅರೆಭಾಷೆಗೆ ಮೀಸಲಿಟ್ಟರೆ ಒಳ್ಳೆಯದು.ು ಪ್ರತಿ ಸಂಚಿಕೆಯಲ್ಲೂ ಒಂದೊಂದ ಅರೆಭಾಷೆ ಕತೆ ಇರಲಿ. ಹಾಸ್ಯವೂ ಇರಲಿ. ಪುಟ ಹೆಚ್ಚಿದ್ದರೆ ಒಳ್ಳೆಯದು ಗೌಡ ಜನಾಂಗದ ಮನೆ ಹೆಸರುಗಳನ್ನು ಪ್ರಕಟಿಸಿ.

ವಂದನೆಗಳೊಂದಿಗೆ,
**ಎಂ. ಇ. ಮುಹಮುದ್,**
ಫಿರ್ದೋಶಿ, ಮಡಿಕೇರಿ.

## ಸಮಸ್ತ ಗೌಡ ಜನಾಂಗಕ್ಕೆ ಪಸರಿಸಲಿ

ಮಾನ್ಯರೇ,

"ಕೊಡಗು ಸಂಗಾತಿ" ಪ್ರಕಾಶನ ಸ್ವಾಗತಾರ್ಹ, ಸದಾ ಗೌಡ ಜನಾಂಗದ ಹೆಮ್ಮೆಯ ಮಾಧ್ಯಮವಾಗಿ ಬೆಳಗಲಿ ಎಂದು ನಮ್ಮ ಹಾರೈಕೆ.

ಪತ್ರಿಕೆ ಕೇವಲ ಕೊಡಗಿನ ಗೌಡ ಜನಾಂಗಕ್ಕೆ ಸೀಮಿತವಾಗಿರದೆ, ಎಲ್ಲಾ ಗೌಡ ಜನಾಂಗದ ಬಗ್ಗೆ ಮಾಹಿತಿ ಒದಗಿಸುದಲ್ಲಿ ಪತ್ರಿಕೆಗೆ ಮೆರಗು ಮಾಡಬಹುದು. ಪತ್ರಿಕೆಯಲ್ಲಿ ಮಕ್ಕಳ ಲೇಖನಗಳು, ಹಾಗೆಯೇ ಅರೆಭಾಷೆಯ ಗಾದೆ-ಬಿಡುಸು ಕಥೆಗಳು ಕೃಷಿ, ವಿಜ್ಞಾನ, ತಾಂತ್ರಿಕತೆಗಳ ಬಗ್ಗೆ ಮಾಹಿತಿಗಳು ಮೂಡಿ ಬರಲಿ ಎಂದು ಆಶಿಸುತ್ತೇವೆ.

**ಶ್ರೀಮತಿ ಮತ್ತು ಶ್ರೀ ಕಾನೆಹಿಡ್ಲು**
**ಸತೀಶ್‌ಕುಮಾರ್,** ಹರಿಹರ.

## ಪ್ರತಿಭೆಗಳನ್ನು ಗುರುತಿಸಿ

ಮಾನ್ಯರೇ,

ಕನ್ನಡ ಮತ್ತು ಗೌಡ ಕನ್ನಡ ಪಾಕ್ಷಿಕ ಪತ್ರಿಕೆ "ಕೊಡಗು ಸಂಗಾತಿ" ತಲುಪಿರುತ್ತದೆ. ತುಂಬಾ ಸಂತೋಷ ಹಾಗೆ ತಮ್ಮ ಪ್ರಯತ್ನಕ್ಕೆ, ತಮಗೂ ತಮ್ಮ ಬಳಗಕ್ಕೂ ಅಭಿನಂದನೆಗಳು. ತಮ್ಮ ಸಮಾಜದ ಬಹುಮುಖ ಪ್ರತಿಭೆ ಬಿ.ಕೆ. ಶಶಿಧರರವರ ಲೇಖನವನ್ನು ಪ್ರಕಟಿಸಿದ್ದೀರಿ. ಕೃತಜ್ಞತೆಗಳು. ಇನ್ನಷ್ಟು ಸಮಾಜದ ಪ್ರತಿಭೆಗಳನ್ನು ಗುರುತಿಸುವಲ್ಲಿ ಮತ್ತು ಎಲ್ಲಾ ವರ್ಗದ ಜನತೆಯನ್ನು ಸ್ಪಂದಿಸುವಲ್ಲಿ ಯಶಸ್ಸನ್ನು ಪಡೆಯಲಿ ಎಂದು ಹಾರೈಸುತ್ತೇನೆ.

**ಚಿದಾನಂದ ಬೈಲಾಡಿ,**
ನ್ಯಾಯವಾದಿ, ಪುತ್ತೂರು.

## ದಾರಿ ದೀಪವಾಗಲಿ

ಮಾನ್ಯರೇ,

ನಿಮ್ಮ ಸೌಹಾರ್ದ ಪ್ರತಿಗೆ ವಂದನೆಗಳು. ಕೊಡಗು ಸಂಗಾತಿ" ನೆಲ್ಲಕ್ಕಿ ದೀಪ ಬೆಳಗಿದಂಗೆ ಬೆಳಗಿ ಕೊಡಗು ಗೌಡರ ಅಭಿವೃದ್ಧಿಗೆ ದಾರಿ ದೀಪವಾಗಲಿ ಎಂದು ಹಾರೈಸುವ

ಇತಿ,
**ಕೆ.ಬಿ. ರಾಮಪ್ಪ ಮತ್ತು ಮನೆಯವರು,**
ಬಿ. ಬ್ಲಾಕ್, ವಿಜಯನಗರ,
ಮೈಸೂರು.

ಮಾನ್ಯರೇ,

ನೂತನವಾಗಿ ಪ್ರಾರಂಭವಾಗಿರುವ "ಕೊಡಗು ಸಂಗಾತಿ" ಪತ್ರಿಕೆಯು ಎಲ್ಲರ ಮನವನ್ನು ಸೆಳೆಯಲಿ. ಈ ನಿಮ್ಮ ಪತ್ರಿಕೆಯು ದಿನಪತ್ರಿಕೆಯಾಗಿ ಮೂಡಿ ಬರಲಿ ಎಂದು ಶುಭ ಹಾರೈಸುವ,

**ಉಪ್ಪಂಡಿರ ಬಿದ್ದಪ್ಪ ಮತ್ತು ಮನೆಯವರು**
(ಸೇನಾಪತಿ, ಪಂಜಾಬು) ಟಿ. ನರಸೀಪುರ.

## ಅರೆಭಾಷಿಕ ವಿಭಾಗ :

# ಪೊನ್ನು ಸಾಂಕಿದ ನಾಯಿ

ನಿನ್ನ ಸಾಂಕುದುಕ್ಕಿಂತ ನಾಯಿನಾರ್ ಸಾಂಕಕಾಗಿತ್! ಹಾಂಗೆಂತೇಳಿ ನಾಯಿ ಸಾಂಕುದೇನೂ ಸುಲಾಭಂತೇಳಿಕಾದುಲೆ. ನಮ್ಮ ಪೊನ್ನುಗೆ ನಾಯಿ ಸಾಂಕೊಕುಂತ ಗ್ಯಾನ ಆತ್. ಯಂತ ಮರಿ ತಾದು? ಬರೀ ಮನೆಯೊಳಗೇ ಓಡಾಡಿಕೊಂಡಿರುವ ನಾಯಿನ ಸಾಂಕುದಾ? ಛೇ ಛೇ ಅಂತ ನಾಯಿ ಸಾಂಕಿರೆ ಪೆಕ್ ಪೆಕ್ಂತ ಬೊಗಳಿಕಂಡ್ ಮನೆಯೊಳಗೇ ಇದ್ದದೆ. ನಾಯಿ ಇದರ್ಲ್ ಇಡೀ ಮನೆ, ತೋಟ, ಗದ್ದೆ ಕಾಯಕೆ. ಮನೆಯೊಳಗೆ ಹೆಂಗೂ ಕೊತ್ತಿ ಉಟ್ಟಲೆ! ಪ್ಯಾಟೆಯುವು ನಾಯಿನ ಬೆಳಿಗ್ಗೆ ವಾಕ್ ಮಾಡ್ಸ್ನದು ಪೊನ್ನು ನೋಡಿತ್ತ್. ಅಲ್ಲಿಯುವು ಈ ಮನೆ ನಾಯಿನ ಆ ಮನೆ ಕಾಂಪೌಂಡ್ ಗೋಡೆ ಹತ್ರ ಆ ಮನೆಯವು ಈ ಮನೆಯ ಕಾಂಪೌಂಡ್ ಗೋಡೆ ಹತ್ರ ಬುಟ್‌ಬುಟ್ಟವೆ. ಇಲ್ಲಿಯೂ ಹೇಸಿಗೆ ಅಲ್ಲಿಯೂ ಹೇಸಿಗೆ! ಅದ್ ಸರಿಯಲ್ಲ. ಅವರವರ ಕಾಂಪೌಂಡ್ ಒಳಗೇ ಬುಟ್ಟರೆ ಏನಾದು? ನಮ್ಮ ದೇಶದ ಸ್ಥಿತಿನೆ ಹಿಂಗೆ. ಈ ಮನೆಯುವು ಕಸಗುಡಿಸಿ ಆ ಮನೆಯ ಹತ್ರ ಹಾಕುವೆ. ಅವು ಇಲ್ಲಿಗೆ ತಂದ್ ಹಾಕುವೆ. ಆದಿರ್ಲ್, ನಮ್ಮ ಪೊನ್ನು ಜೂಲ ಜೂಲ ಇರುವ ನಾಯಿನ ಸಾಂಕುದಾತ ಗ್ಯಾನ ಮಾಡ್ತ್. ಅಯ್ಯಯ್ಯೋ ಮೈ ತುಂಬಾ ಉದ್ದದ್ದ ಕೂದೂಲು ಇದ್ದರೆ ಚಿಗಟನೋ, ಹೇನೋ ಸುರಾದರೆ ಬೊಗುಳುದ್ ಬುಟ್ ಆ ನಾಯಿ ಬರಾಬರಾಂತ ಮೈ ಕೆರಕಂಬದೇ ಅದ್ರ ಕೆಲ್ಸ ಆಗಬುಟದೆ. ಅದ್ರ ಮೈ ಬಾಚವು ಯಾರ್? ಆ ಸ್ಟೈಲ್ ನಾಯಿ ಬ್ಯಾಡ. ಒಮ್ಮೆ ಬೊಗಳಿರೆ ಗರ್ಭನಡುಗೊಕು. ಅಂತ ನಾಯಿನೆ ಸಾಂಕಿನೆಂತ ಗ್ಯಾನಮಾಡ್ದ ಪೊನ್ನು ಸಂತೆಗೆ ಹೋಗಲಿ, ನೆಂಟ್ರ ಮನೆಗೆ ಹೋಗಲಿ, ಮೊದುವೆ ಮನೆಗೆ ಹೋಗಲಿ ಎಲ್ಲಿಗೆ ಹೋದ್ರೂ "ನಿಮ್ಮಲ್ಲಿ ನಾಯಿ ಮರಿ ಉಟ್ಟಾ? ಕಂತ್ರಿಯೋ ಜಾತಿಯೋಂತ" ಕೇಳಿಕಂಡೇ ಇದ್ದದೆ. ಅವಂಗೆ ನಾಯಿದೊಂದು ಹುಚ್ಚುಂತ ಜನ ಗೊಣಗಿಕಂಡವೆ.

ಒಂದಿನ ಪೊನ್ನುಗೆ ಒಂದ್ ಗಂಡ್ ಮರಿ ಸಿಕ್ತ್. ಅತ್ತ ಕಂತ್ರಿನೂ ಅಲ್ಲ, ಇತ್ತ ಜಾತಿಯೂ ಅಲ್ಲ. ತಂದ ದಿನಂದ ಮರ್ಡಿಕೆ ಸುರು ಮಾಡ್ದ ಮರಿ ರಾತ್ರೆ ಹಗಲೂ ಒಂದೇ ರಾಗ. ಹೆಚ್ಚು ಕಮ್ಮಿ ಒಂದ್ ವಾರ ಮುಟ್ಟ ಮರ್ಟ ಮರಿ ಮತ್ತೆ ಸುಮ್ಮನಾತ್. (ಹೊಸದಾಗಿ ಬಂದ ಸೊಸೆಗೆ ಮನೆ-ಮಂದಿ ಪರಿಚಯ ಆಗುವ ವರೆಗೆ ಒಂಥರಾ ಕಸಿವಿಸಿ ಆದೆ-ಮತ್ತೆ ಸರಿಯಾದಲ್ಲ ಹಂಗೆ ಈ ಮರಿಗೂ ಆತ್)

ಪೊನ್ನು ಮರಿಗೆ ಹಾಲ್ ಅನ್ನ ಕಲ್ಸಿ ತಿಂಬಕೆ ಕೊಡಿಕೆ ಸುರು ಮಾಡ್ತ್. ಮರಿ ಲಾಯ್ಕ ತಿಂಬೋದು ಕೈಯಾಲೆ, ಬಾಡೆ, ಕ್ವಾಂಬರೆ, ಅಡಿಗೆ ಮನೆ ಹೀಂಗೆ ಸಿಕ್ಕಿದಲೆಲ್ಲಾ "ತುರ್ ತುರ್" ಮಾಡಿಕೆ ಸುರು ಮಾಡ್ತ್. ಅಂಗಳಕೆ ಸುತಾರಾ ಇಳಿಯೊದ್‌ಲೆ. ಪಾಪ, ಮರಿಯಲ್ಲ ಹೊಡಿಬೇಡಿ ಬಡಿಬೇಡಿಂತ ಮನೆಯುವ್ನ ಸಮಧಾನ ಮಾಡ್ತ್.

ನಾಯಿಗೆ ಸಿಂಗಂತ ಹೆಸರಿಟ್ಟತ್. (ಸಿಂಗಂತೇಳಿರೆ ಸಿಂಹಂತ ಅರ್ಥ) ಒಮ್ಮೆ ಸಿಂಗನ ಮೈಪೂರಾ ಚಿಗಟ ಹೇನೆಲ್ಲಾ ಆಗಿ ನೋಡಿಕೆ ಬೊತ್ತ್. ಪೊನ್ನು ಏನ್ ಮಾಡ್ತ್? ಸೀಮೆ ಎಣ್ಣೆಗೆ ಸೊಲ್ಪ ಎಂತದೋ ಮದ್ದ್‌ನ ಮಿಶ್ರ ಮಾಡಿ ಮೈಗೆ ಉಜ್ಜಿತ್. ಹೇನ್ ಚಿಗಟ ಎಲ್ಲಾ ಉದುರಿ ಬಿದ್ದೊ. ಒಂದುವಾರ ಆತೋ ಇಲ್ಲೆಯೋ ಸಿಂಗನ ಮೈಲಿದ್ದ ರೋಮ ಪೂರ ಉದುರಿ ಹೋತು. ಟೈಪಾಯ್ಡ್ ಆದರೆ ತಲೆಕೂದಲು ಉದುರಿದಲ್ಲ ಹಂಗಾತ್. ಹಾ! ಶಿವ್ನೆ ಹಿಂಗಾತಲೆ ಅಂತ ಗ್ಯಾನ ಮಾಡ್ದ ಪೊನ್ನು ಸಿಂಗನ ಮೈಗೆ ತೆಂಗಿನ ಎಣ್ಣೆ ಪೂಜಿತ್. ಬೇಗ ರೋಮ ಬರ್ಲಿಂತ. ಎಣ್ಣೆ ಪೂಜಿದ ರಾತ್ರೆಯೆಲ್ಲಾ ನಾಯಿಮರಿ ಕುಂಯೋ ಕಂಯೋಂತ ಮರ್ಟದೆ. ಇದ್ಕೇನಾತ್‌ತ ಎದ್ದ್ ನೋಡ್ರೆ ಅದ್ರ ಮೈ ಕಣ್ ಪೂರಾ ಪಿಜಿನ್‌ಗ ತುಂಬಿಕಂಡೊಳೊ. ಕೂಡ್ಲೆ ಮೈಲಿದ್ದ ಪಿಜಿನ್‌ನೆಲ್ಲಾ ಉರುಂಬಿ ಉರುಂಬಿ ಕೊಂದದೆ. ಆ ರಾತ್ರೆ ಹೆಂಗೊ ಕಳ್ತ್. ಮರುದಿನಂದ ನಾಯಿ ಮಣ್ ಕೆರೆಯೋದು ಗುಂಡಿ ಮಾಡ್ದು ಹಸಿ ಮಣ್ ಸಿಕ್ಕರೆ ತಿಂಬೋದು ಮಾಡಿಕೆ ಸುರು ಮಾಡ್ತ್. ರಕ್ತ ರಕ್ತನೇ ಬೇಧಿಮಾಡಿಕೂ ಸುರಾತ್. ಹುಲ್ಲು ತಿಂಬೊದು ವಾಂತಿ ಮಾಡ್ದು. ಹಿಂಗೆ ಒಂದ್ ತಪ್ಪಿರೆ ಒಂದ್ ಕಾಯಿಲೆ ನಾಯಿಗೆ ತಪ್ಪಿತ್‌ಲೆ. ಪೊನ್ನು ಡಾಕ್ಟರ್ನ ಕಂಡ್ ಹುಳಕೆ ಮದ್‌ಕೊಡ್ಸಿತ್. ಇದಾದ ಮೇಲೆ ಸಿಂಗ ಸೊಲ್ಪ ನೋಡಂಗಾತ್.

ಈಗ ಸಿಂಗನ ಆಟ ನೋಡೊಕು. ಮಕ್ಕಳ ಚಪ್ಪಲ್‌ನ ಕಚ್ಕಂಡ್ ಓಡ್ದ. ಬಾಚಣಿ ಸಿಕ್ಕಲಿ, ಕಾಗದ ಸಿಕ್ಕಲಿ, ಚಿಪ್ಪಿ ಸಿಕ್ಕಲಿ ಬಟ್ಟೆ ಸಿಕ್ಕಲಿ ಎಂಥ ಸಿಕ್ಕಿರೂ ಕಚ್ಚಿಕಂಡ್ ಹೋದು, ಎಲ್ಲಾ ಚೆಲ್ ಚೆಲ್ ಮಾಡಿ ಹಾಳ್ ಮಾಡಿಕೆ ಸುರಾತ್.

ಮೊನ್ನೆ "ಹೊಸಬ ಹೊಸಬಿ" ಬಂದಿದ್ದೊ. ಅವರ ಬೂಟು, ಚಪ್ಪಲಿ, ಕಾಲ್ ಚೀಲ ಪೂರಾ ಕಚ್ಚಿ ಕಚ್ಚಿ ಹಾಳ್ ಮಾಡ್ತ್. ಸಿಂಗಂಗೆ ಒಳ್ಳೆ ರುಚಿ. ಬಂದ ನೆಂಟ್ರುಗ ಬೆಳಿಗ್ಗೆ ಎದ್ ನೋಡ್ರೆ ಕಥೆ ಹೀಂಗೆ. ಅವ್ಕೆ ಮರ್‌ಡಿಕೆ ಬಂದಂಗಾಗಿತ್ ನೀವೇ ಗ್ಯಾನ ಮಾಡಿ. ಈಗ ಒಂದ್

ಜೊತೆ ಬೂಟ್‌ನ ಬೆಲೆ ಹಿಂದೆಲ್ಲಾ ಒಂದ್ ಜೊತೆ ಎತ್‌ತೆಗೆಕಾಗಿತ್ತ್. ಅಷ್ಟ್ ರೇಟಿನ ಕಾಲ ಬಂದ್ ಬುಡ್ತುಲೆ ಅಂಥಾ ಬೂಟ್ ಕದ್ದೋದರೆ ಅಥ್ವಾ ಹಾಳಾದರೆ ಹೊಟ್ಟೆ ಉರಿಯೋದಲೆಯಾ ಹೇಳಿ ?

ಈಗ ಪೊನ್ನುನ ನಾಯಿ ಲಾಯ್ಕ ಆಗುಟು. ಗೇಟ್‌ಗೆ "ನಾಯಿ ಉಟ್ಟುಜಾಗ್ರತೆ"ಂತ ಬೋರ್ಡ್‌ಹಾಕಿಟ್ಟು. ಬೋರ್ಡ್‌ಲಿ ಬಾಯಿಬುಟ್ಕಂಡ ನಾಯಿದ್ ಚಿತ್ರನೂ ಉಟ್ಟು. ಅದರ್ನ ನೋಡಿಕೆ ಎಂಥ ವಂಗೂ ಹೊಟ್ಟೆಲಿ ಒಂಥರಾ ಆದೆ. ಆದರೆ ಪೊನ್ನುನ ಸಿಂಗನಾಯಿ ಹೊಟ್ಟೆ ತುಂಬಾ ತಿಂಬೋದು. ಉಬ್ಬೆಸಾದವರಂಗೆ ಬಿದ್ದ್ ಕಂಬೊದಲ್ಲದೆ, ಅಪ್ಪಿತಪ್ಪಿಯೂ ಬೊಗು ಉದ್‌ಲೆ. ಬಾಲಗೀಲನ ನೀವ್ ಮೆಟ್ಟರೆ 'ಕಂಯೋಂತೇಳಿಕಂಡ್' ಆಚೆ ಓಡ್ದು. ಆದ್ರೂ ಪೊನ್ನು ಬರ್‍ದ ಬೋರ್ಡ್ ನೋಡಿ ಜನ ಹೆದ್ರಿ ಹೆದ್ರಿ ಅಲ್ಲಿಂದಲೇ ಕರ್‍ದವೆ. ಆಗ ಪೊನ್ನು ಓಡಿ ಹೋಗಿ ನಾಯಿನ ಹಿಡ್ಕಂಡ್ "ಸಿಂಗ ಸುಮ್ಮನಿರ್, ಸುಮ್ಮನಿರ್ ಸಿಂಗಂತ" ಸಮಾಧಾನ ಮಾಡ್ದೆ. ಪೊನ್ನು ಹಂಗೆ, ಸಿಂಗ ಹಿಂಗೆ, ನಿಮ್ಮ ನಾಯಿ ಹೆಂಗೆ ?

● ಬಿ.ಆರ್. ಜೋಯಪ್ಪ
ಮದೆ.

## ಮೋಟ್ ಭಾವ

ಒಮ್ಮೆ ನಮ್ಮ ಮೋಟ್ ಬಾವನ ದೋಸ್ತ್ ರಾಬರ್ಟ್ ಎಂಬ ಇಂಗ್ಲೀಷ್‌ನವ ಕೊಡಗಿಗೆ ಬಾತ್. ಆಗ ನಾಟಿ ಸಮಯ ಮನೆಲಿ ಮಾತ್ ಕತೆ ಎಲ್ಲ ಆತ್. ಗದ್ದೆಗೆ ಇಬ್ಬರು ಸೇರಿ ಹೊರಟೊ. ಏರಿ ಮೇಲೆ ಹೋಕಾಕನ, ಏರಿ ಮೇಲೆ ಒಂದು ಏಸಂಡ್ ಬರ್‍ತ ಇತ್ತ್. ಆಗ ರಾಬರ್ಟ್ "ವಾಟ್ ಈಸ್ ದಿಸ್"ಂತ ಕೇಳ್ತ್. ಆಗ ಮೋಟ್ ಬಾವ "ದಿಸ್ ಈಸ್ ಏಸಂಡ್"ಂತ ಹೇಳ್ತ್. ಆಗ ರಾಬರ್ಟ್ "ಪ್ಲೀಸ್ ಎಕ್ಸ್‌ಪ್ಲೇಯಿನ್ ಇಟ್"ಂತ ಕೇಳ್‌ಕಾಕನ, ಮೋಟ್ ಬಾವ ಹರ್‍ದ ಕೋಟನ ಸರಿ ಮಾಡಿಕಂಡ್, ಯು ಸೀ ಏಯ್ಟ್ ಫಿಂಗರ್ಸ್ "ಬ್ಯಾಕ್ ಅಂಡ್ ಫ್ರೆಂಟ್ ಮೂವಿಂಗ್" ಎಂಡ್ "ಟೂ ಕಟಿಂಗ್ ಪ್ಲೇಯರ್ಸ್" "ಎನಿಬಡಿ ಟಚ್ಚಿಂಗ್" "ಏಕ್ ಥಂ ಕಚ್ಚಿಂಗ್"ಂತ ಮೋಟ್ ಬಾವ ಜಾರ್‌ತ್ತಿರುವ ಪ್ಯಾಂಟ್‌ನ ಎತ್ತಿಕ್ಕಂಡ್ ಹೇಳಿಕ್ಕಾಕನ ರಾಬರ್ಟ್‌ಗೆ ಕುಸಿಯೋ ಕುಸಿ.

● ಗುಡ್ಡೇರ ಜಿ. ವನಮಾಲ
ಕುವೆಂಪುನಗರ, ಮೈಸೂರು.

## ಕೂರಿಕ್ಕೆ ಪುರ್‍ಸೊತ್ತಿಲ್ಲೆ !

ಬಸ್‌ಲಿ ಖಾಲಿ ಸೀಟ್‌ಇತ್ತ್. ನಿತ್ತ್‌ಕಂಡ್ ಇದ್ದ ಸೋಂಪಜ್ಜನಕಲೆ ಕಂಡಕ್ಟರ್ ಕಾಸ್ ಕೇಳ್‌ಕೆ ಬಾತ್. ಯಾಕಜ್ಜಾ ನಿತ್ಕೊಂಡೊಳರಿ. ಸೀಟ್ ಖಾಲಿ ಉಟ್ಟಲ್ಲೆ ಕುದ್ದ್‌ಕಣಿಂತ. ಅಜ್ಜ ಹೇಳ್ತ್, ಕೂರಿಕ್ಕೆಲ್ಲಾ ಪುರ್‍ಸೊತ್ತಿಲ್ಲೆಪ್ಪಾ ನಂಗೆ, ಅರ್ಜೆಂಟಾಗಿ ಒಂದ್ ಮದ್ವೆಗೆ ಹೋಕು.

● ಎಂ.ಇ. ಮಹಮ್ಮದ್,
ಫಿರ್ದೋಶಿ, ಮಡಿಕೇರಿ.

## ವಡ್ಸ ಕತೆ (ಒಗಟು)

1. ಎತ್ತ್ ಮಲ್‌ಗಿಟ್ಟು, ಹಗ್ಗ ಮೇದದೆ ಅದ್ ಎಂತಾ ?
2. ಕತ್ತಲೆ ಕೋಣೆಲಿ ಕರಿಹೆಂಟೆ ಕುದ್ದುಟು ಅದ್ ಎಂತಾ ?
3. ಗಳಿಗಳೆ ಮರಲಿ ಕೆಂಪಣ್ಣ ಕುದ್ದುಟು ಅದ್ ಎಂತಾ ?
4. ಅಡ್ಡವಾದ ಮರಲಿ ಗಿಡ್ಡಣ್ಣ ಕುದ್ದುಟು ಅದ್ ಎಂತಾ ?
5. ಗಿಡ್ಡಣ್ಣ ತಿಕಲಿ ದುಡ್ಡು ಸೊರ್‌ದದೆ ಅದ್ ಎಂತಾ ?
6. ಅವ್ವ ಚೆಲ್ಲಿರಿ ಪಿಲ್ಲಿರಿ, ಮುಂಜ್ಜ ದೇವರ ಪೂಜಾರಿ ಅದ್ ಎಂತಾ ?
7. ಬಿಳಿಗದ್ದೆ, ಕರಿಬೀಜ, ಕೈಯ್ಲಿ ಬಿತ್ತುದು, ಬಾಯ್ಲಿ ಹೆರ್‍ಕುದು ?

● ಕೋಳುಮುಡಿಯನ
ಪಾರ್ವತಿ ರಾಮಯ್ಯ
ಗಾಳಿಬೀಡು.

– ಉತ್ತರಗಳು –

1. ಕುಂಬಳಕಾಯಿ 2. ಕಾವುಲಿ 3. ಅಡಿಕೆ
4. ಹಲ್‌ಸನ ಕಾಯಿ 5. ಬಾಳೆ ಗೊನೆ
6. ಹೊದ್‌ರಿ 7. ಪೇಪರ್, ಅಕ್ಷರ, ಕೈಲಿ ಬರಿಯುದು, ಬಾಯಿಲಿ ಓದುದು.

# ಸ್ವಾಂತೆ ಕಾಯಿ ಸೂಪ್ ಮಾಡುದು

## ಹಿಂಗೆತಾನೆ

ಅಮ್ಮೃಕ್ಕಜ್ಜಿ : ಕೂಸು, ಕೂಸಕ್ಕ ಸ್ವಲ್ಪ ಇತ್ತ, ನೋಡ್ ಮೊನ್ನೆ ಮೈಸೂರ್‌ಂದ ರಾಮಕ್ಕತ್ತೆ ಹೇಳ್ದ್ ಕೇಳ್‌ದಾ.

ಕೂಸಕ್ಕ : ಎಂತದಜ್ಜಿ ನಿಂದ್ ರಾಮಾಯಣ.

ಅಮ್ಮೃಕ್ಕಜ್ಜಿ : ಒಂದ್ ಇಲ್ಲೆ, ರಾಮಕ್ಕತ್ತೆ ಮೈಸೂರಿಂದ ಬಾಕನ ಹೇಳ್ತ್ ನೋಡು ಎಂತದೊ ಸ್ವಾಂತೆಕಾಯಿ ಸೂಪ್‌ತ, ಸ್ವಲ್ಪ ಹೇಳಿಯನೇ

ಕೂಸಕ್ಕ : ಅದಾ, ಅದೇನ್ ದೊಡ್ಡ ವಿಶೇಷ, ನಂಗೊತ್ತಿಲ್ಲೆ ಮಾಡಿಕೆ ಅದ್

ಅಮ್ಮೃಕಜ್ಜಿ ! ಅಂದರೆ ಬಾ ಇಲ್ಲಿ, ಸ್ವಲ್ಪ ಹೇಳ್, ಸ್ವಾಂತೆ ಕಾಯಿ ತ್ವಾಟಲಿ ಬೇಕಾದಷ್ಟ್ ಬುಟ್ಟುಟು ನೋಡ್ ಎಲ್ಲಾ ಹಾಳಾದೆ, ಅದಕ್ಕೆಸ್ವಾಂತೆಕಾಯಿ ಸೂಪ್ ಮಾಡಿ ಮೈಸೂರಿಗೆ ರಾಮಕ್ಕತ್ತೆಗೆ ಕಳ್ಸರೆ ಅವ್ಳ ಮಾರಿ ಸ್ವಲ್ಪ ದುಡ್ಡು ಮಾಡಿದರೆ ಮಕ್ಕಳಿಗಾತ್. ಪಾಪ ಅವಳ ಕಷ್ಟ ಹೇಳಿಕಾ ಮಲೇ ಅಲಾ.

ಕೂಸಕ್ಕ : ಅದಕ್ಕೇನ್ ಕೇಳಿಕಾ, ಯಿಂದಾ, ಅದ್‌ಕೆ 1 ಸ್ವಾಂತೆ ಕಾಯಿ ಸಾದಾರಣದ್ದ್, 2 ಚಂಚ ಕಾರ್ನ್‌ಫ್ಲೋರ್ ಹಾಕೋಕು, ಅದ್ ದೋಲ್ ಸೇಟ್‌ನ ಅಂಗಡಿಲಿ ಸಿಕ್ಕಿದೆ. ಮತ್ತೆ 2 ಚಂಚ ಬೆಣ್ಣೆ 1 ದೊಡ್ಡ ನೀರುಳ್ಳಿ, 4 ಚಂಚ ಕೆನೆ, 1/2 ಚಂಚ ಕೆಂಪು ಮೆಣಸಿನ ಪೊಡಿ ತಕ್ಕಣಕ್ಕು ಮಾಡುದ್ ಹೆಂಗೆ ತೇಳಿರೆ, ಸ್ವಾಂತೆಕಾಯಿ ತೊಟ್ಟ್ ಹತ್ರ ಕತ್ತರಿಸಿ ಹಾಕಿ ಸೊನೆ ತೆಗೆಕ್ಕು, ಮತ್ತೆ ಸ್ವಪ್ಪೆ ತೆಗೆಕು ಹಂಗೆ ಬೆಣ್ಣೇಲಿ ಹುರಿಯೋಕು, ನೀರು ಎಷ್ಟ್ ಬೇಕು ಅಷ್ಟ್ ಹಾಕಿ 10 ನಿಮಿಷ ಬೇಯ್ಸೋಕು. ನೀರುಳ್ಳಿ ಸಣ್ಣ ಕೊಯಿಕ್ಕಂಡ್ ಹಾಲಿಗೆ ಹಾಕಿ ಬೇಯ್ಸೋಕು. ಇದನ್ನ ಸ್ವಾಂತೆಕಾಯಿ ರಸಕ್ಕೆ ಸೇರ್ಸೊಕ್ಕು, ಮೆಲ್ಲಗೆ ಸೊಸೊಕು ಮತ್ತೆ ಕೆನೆ, ಉಪ್ಪು, ಮೆಣಸು ಹೊಡಿ ಹಾಕುಕು.

ಅಮ್ಮೃಕ್ಕಜ್ಜಿ : ಶೀ, ಇಷ್ಟೇನೇ ಇದ್‌ನಂಗೆ ಮಾಡಿಕೆ ಗೊತಿಲ್ಲೆ, ನೀನ್ ಹೇಳೋಕಾ. ಬ್ಯಾರೆ ಎಂತಾದ್ ಉಟ್ಟಾತ ಕೇಳಿದೆ ಅಷ್ಟೆ.

● ಬೈನೆರವನ ಇಂದ್ರಕುಮಾರ್, ಮದೆನಾಡು

# ಠಾಬೆದಾರಿಕೆ

ದೊಡ್ಡಂವಗೊಂದು ಪಟ್ಟೆದಾರಿಕೆ
ಸಂಣಂವಗೊಂದು ಠಾಬೆದಾರಿಕೆ ।
ಗೊದ್ದವರಿಗೊಂದು ಪಾಲ್‌ದಾರಿಕೆ
ಕೊಯಿಲೆ ಮೀನಿಗೊಂದು ಓಡುಗಾರಿಕೆ ॥

ರೂಪಾಯಿ ಮನುಷ್ಯಂಗೆ ದೊಡ್ಡಗಾರಿಕೆ
ಸಿಪಾಯಿ ಮನುಷ್ಯಂಗೆ ಎದೆಗಾರಿಕೆ ।
ದೊಡ್ಡವ ನಾನ್ ಸಂಣವ ನೀನ್
ಅಂತಾ ಹೇಳುವ ದೌಲುಗಾರಿಕೆ ॥

ಮಾಳಂದ ಹೊರ್‌ಟ್ ಪಿಳಿಪಿಳಿನೋಡುವ
ಬರೆ ಮೊನಿಗೊಂದು ಯಜಮಾನಿಕೆ ।
ಕುರಿಗಳ ಹಂಗೆ ಜೈ ಜೈ ಹೇಳುವ
ತರತರ ಮನುಷ್ಯಂಗೆ ಗಂಡ್‌ಗಾರಿಕೆ ॥

ಮೊರಟೆ ಮೀನಿಗೊಂದು ರಾಜಗಾರಿಕೆ
ಕುರುಟು ನ್ಯಾಯಗಾರಂಗೆ ಸುಭೇದಾರಿಕೆ !
ಎಸ್‌ಂಡ್ ಹಿಡಿಕೆ ಕಪ್ಪೆಕೋಲು ಹಾಕುವ
ಕಸ್‌ಂಡ್ ಮಕ್ಕಳಿಗೆ ದೌಲುಗಾರಿಕೆ ॥

ಹುತ್ತರಿ ಹಬ್ಬಲಿ ಪಟಾಕಿ ಹೊಟ್ಟಿಸಿ
ಪೊಲಿ ಪೊಲಿ ಹೇಳುವ ಡಂಭಗಾರಿಕೆ ।
ಕೊಯಿಲೆ ಮೊನ್‌ಗೈಯಿಪ್ಪಗೆ ಒಣಗಿಲ್ ರೊಟ್ಟಿ
ಹಾಕಂಡ್ ತಿಂಬೊದು ಕುಷಿಗಾರಿಕೆ ॥

ರಬ್ಬರ್ ಬಿಲ್ಲ್‌ನ ಕೈಲಿ ಹಿಡ್ದ್
ಎರಡ್ ಜೋಬಿಗೆ ಕಲ್ಲ್ ಸುರ್ದ್ ।
ಕಾಡ್‌ನ ಕಡೆಗೆ ಬೇಟೆಗೆಹೋದು
ನಮ್ಮೂರ ಹೈದಂಗಳ ಆಟಗಾರಿಕೆ ॥

ಕಾಡ್‌ಲಿ ನೋಡಿರೆ ತೆಕ್ಕಟೆ ಕೋಳಿ
ಗದ್ದೇಲಿ ನೋಡಿರೆ ಕುಂಡಕೋಳಿ ।
ರಬ್ಬರ್ ಬಿಲ್ಲಿಗೆ ಹೆದ್‌ರದ ಹಕ್ಕಿ
ತಲೆ ಹಾರುದು ನೀ ಕುದ್ದರೆ ಸೊಕ್ಕಿ ॥

● ಕೂಡಕಂಡಿ ಎ. ಪೊನ್ನಪ್ಪ,
ವಕೀಲರು, ಮಡಿಕೇರಿ.

## ಮನೆ ಮದ್ದ್ ಹಗ್ಲ ಕಾಯಿ

ಈಗ ಸಾಧಾರಣ ಎಲ್ಲರ ಮನೇಲಿ ತರ್ಕಾರಿ ಮುಗಿದ್‌ಕಂಡ್ ಬಂದಿರೊಕ್ ಅಲ್ಲ ? ಕೆಲೊ ಜನ ಹಗ್ಲಕಾಯಿ ನೂ ಬೆಳ್ಸಿರೊಕ್ ಕಂಡದೆ. ಅದಂರ್ದ ಗೈವು ಮಾಡಿಕೆ ಮಾತ್ರ ಅಲ್ಲ. ಮನೆ ಮೊದ್ದಾಗಿ ಕೂಡಾ ತುಂಬಾ ಉಪಕಾರಕ್ಕೆ ಬಂದದೆ.

ಡಯಾಬಿಟಿಸ್ (ಸಕ್ಕರೆಕಾಯಿಲೆ)ಗೆ :

ನಾಲ್ಕೈದ್ ಹಗ್ಲ ಕಾಯಿ ರಸನ ಯಾಗೋಳು ಬೆಳ್ಗಿ ಖಾಲಿ ಹೊಟ್ಟೆಲಿ ತಕಣೊಕು. ಇದ್ರಂದ ಕೈಕಾಲ್ ಉರಿ ಸನ ಕಮ್ಮಿ ಆದೆ.

ಮೂಲವ್ಯಾಧಿಗೆ (ಗುದದಲ್ಲಿ ಆಗುವ ಹುಣ್ಣು) :

ಮೂರುಚಮ್ಚ ಹಗ್ಲ ಸೊಪ್ಪ್‌ನ ತಾಜಾ ರಸ ತಕಂಡ್, 1 ಗ್ಲಾಸ್ ಮಜ್ಜಿಗೆಲಿ ಸೇರ್ಸಿ. ದಿನೋಲು ಬೆಳ್ಗಿ ಒಂದು ತಿಂಗಳ್‌ವರೆಗೆ ಕುಡ್ಚರೆ ಮೂಲವ್ಯಾಧಿದ್ ಉಪದ್ರವ ಕಮ್ಮಿ ಆಕಂಡ್ ಬಂದದೆ. ಇದರೊಟ್ಟಿಗೆ ಹಗ್ಲ ಬೇರ್‌ದ್ ಲೇಪನ ಗುದ ಪ್ರದೇಶಕ್ಕೆ ಹಚ್ಚಿರೆ ಬೇನೆ ಮತ್ತೆ ಉರಿ ನಿತ್ತ್‌ಹೋದೆ.

ಅಷ್ಟ್‌ಮಾತ್ರ ಅಲ್ಲ, ಮೂರು ಗ್ರಾಂ. ಪ್ರಮಾಣದ್ ಬೇರ್‌ದ ರಸ, ಅಷ್ಟೆ ಪ್ರಮಾಣದ್ ತುಳ್ಸಿ ರಸ ಮತ್ತೆ ಸ್ವಲ್ಪ ಜೇನ್ ಸೇರ್ಸಿಕಂಡ್, ಯಾಗೋಳು ರಾತ್ರಿ ಮಲ್‌ಗ್‌ಕನ ತಕೋಳ್ತಾ ಇದ್ದರೆ ಅಸ್ತಮಾ ಮತ್ತೆ ಬೇರೆ ಉಸಿರಾಟದ್ದ್ ಅಲರ್ಜಿ ಕಾಯಿಲೆಗ, ಆಗಾಗ ಉಪದ್ರ ಕೊಡ್ವ ನೆಗ್ಡಿ ಮತ್ತೆ ಗಂಟಲ್ ಕೆರ್ತ ಹತೋಟಿಗೆ ಬಂದದೆ. ಕಮ್ಮಿ ತೇಳ್ರೆ ಒಂದು ತಿಂಗಳ ವರೆಗೆ ಈ ಮೊದ್ದ್‌ನ ತಕೊಣೊಕು.

ಮದ್ಯಪಾನ (ಹೆಂಡದ) ವ್ಯಸನಿಗಳಿಗೆ ಸನ ಹಗ್ಲ ಕಾಯಿ ಎಲೆದ್ದ್ ರಸ ಒಂದ್ ಒಳ್ಳೆ ಮದ್ದ್. ಇದನ್ನ ದಿನಾಲೂ ತಕೊಳ್ತಾ ಇದ್ದರೆ, ಹೆಂಡ ಕುಡಿಯುವ ಬಗ್ಗೆ ಜಿಗುಪ್ಸೆ ಉಂಟಾದೆ. ಮಾತ್ರ ಅಲ್ಲದೆ ತುಂಬಾ ಕುಡಿದಂರ್ದ ಶುರು ಆಗುವ ಅಮಲ್, ಮತ್ತೆ ಅಡ್ಡ ತೊಂದರೆಗ, ಹಂಗೇನೇ ತುಂಬಾ ಸಮಯಂದ ಕುಡ್ದ್ ಕುಡ್ದ್ ಉಂಟ್ಯಾಗ್ವ ಯಕೃತ್‌ನ ತೊಂದರೆಗಳ್ನ ತೊಲ್ಗಿಸಿಕ್ಕೆ ಈ ಮದ್ದ್ ಒಂದ್ ಸರ್ಕ ಮತ್ತೆ ಉಪಯೋಗ ಆಗುವ ಒಳ್ಳೆ ಮೊದ್ದ್.

ಮುಟ್ಟಿನ ಸಮಯಲಿ ಜೋರಾದ ಹೊಟ್ಟೆ ಬೇನೆ ಮತ್ತೆ ರಕ್ತಸ್ರಾವ ಸರಾಗ ಆಗದ ಹೆಂಗ್‌ಸ್ಗ, ಮುಟ್ಟ್‌ನ ಸಮಯಕ್ಕೆ ಒಂದ್ ವಾರ ಮುಂಚೆ, ದಿನಾಲೂ 10 ಮಿ. ಲೀಟರ್ ಪ್ರಮಾಣಲಿ ಹಗ್ಲ ಕಾಯಿ ರಸನ ಕುಡಿದಂರ್ದ ಮುಟ್ಟಿನ ಸ್ರಾವ ಸರಿಯಾಗಿ ಆದೆ.

ಹಗ್ಲಕಾಯಿ ರಸ ತುಂಬಾ ಕಂಹಿ ಇರ್ದಂದ ಸ್ವಲ್ಪ ಪ್ರಮಾಣಲಿ ಶುರುಮಾಡ್ದು ಒಳ್ಳೆದ್.

ಸಂಗ್ರಹ : **ಕೋಟೆಮನೆ ಮನೋಹರ ಶಿವಯ್ಯ**, ಮದೆನಾಡು

## ಮಿಲ್ರಿ ಹೈದನ ಐಲಾಟ

ಬೋಳ್ಪ್‌ನ ಕ್ಯಾಟ ಗಾಳಿ ನೋಡಿ ಖುಷಿಯಾಗಿ
ನನ್ನ ಗೂಡೆನ ರೀನಾ ! ರೀನಾ! ಎಂದ್ ಕರ್ಕಂಡ್
ಊರೆಲ್ಲಾ ತಿರ್‌ಗಿ, ಬಂದ್ ಬೆನರ್ ತೊಳಿಯಕ್ಕೆ
ಗುಡ್ಡಕ್ಕೆ ಹೋದರೆ, ಅಲ್ಲಿಟ್ಟು ರೊಟ್ಟೆ ಬಂದ
ಕೈಯ್ಯ್‌ನ ತೊಳ್ಕಂಡ್ ರೀನಾ ॥
ನಿನ್ನೆ ಕೊಡ್‌ಕನಾ ಮುತ್ತ್ ಬ್ಯಾಡತ್ತಾ
ಏಕೆ ಹೇಳ್ದ್ ಎಂದ್ ಕೇಳ್ದೆ ನ್ನಾ,
ಜುಟ್ಟ್ ಹಿಡ್ದ್ ಕೊಡ್‌ಕನ ಸಿಂಹಿ
ಮುತ್ತ್ ಆತ್, ಬಂದಕೈಲಿ,
ನನ್ನೇದೆವ್ಯಾಲೆ ಗುರ್ತ್ ॥
ಹೊಸ ಬಟ್ಟೆ ಹಾಕಿ ಹೊರ್ಡ್‌ಕನ ನಾನ್
ಬೋಜಪ್ಪನ ಮನೇಲಿ ಅಂಣ ಕೇಳ್ತ್,
ತಂಮ, ಎದೇವ್ಯಾಲೆ ಎಂತ್‌ದ್‌ನೇ,
ಆದ್ ಬಂದತೇಳಿ, ಕುದ್ಚನೆ ತಲೆಕೆಳ್‌ಗಾಕಿ
ಮನೆಯವರೆಲ್ಲರ ಎದ್‌ರಿಗೆ ॥
ಎದ್‌ರ್ ಕುದ್ದಾ ರಿನಾ ಕಣ್ಣ್‌ಗಲಿಸಿ,
ನೋಡ್‌ಕನ ನಮ್ಮ ಮುಖಕೆಮಿ ಎಲ್ಲಾ
ಕೆಂಪಾತ್ ನಾಚಿಕೆಯಿಂದ, ಇಬ್ಬರ್
ಮುಖ ಮುಖ ನೋಡಿ ತಲೆ ತಗ್ಗಿಸಿಕಂಡೊ,
ಎಲ್ಲವುಕೆ ಗೊತ್ತ್‌ಟ್ಟುತೇಳಿ ॥
ಎರ್‌ಡ್ ಕಡೆಯವುಕೆ ಗೊತ್ತಾತ್,
ನಮ್ ಪ್ರೀತಿನ, ಕಟ್ಟೆದೊ ನಮ್ಮನ್ನ
ಮದ್ವೆತೇಳ್‌ವ ಹಗ್ಗಂದ, ಜೆನಗಳ ಸೇರ್ಸಿದೋ
ಕೂರ್ಸಿದೋ ಹಸೆಮ್ಯಾಲೆ, ಎತ್ತಿದೋ ಮಂಗಳಾರತಿ,
ಹಾಕಿದೊ ಅಕ್ಕಿ, ಮಾಡಿದೋ ಆಶೀರ್ವಾದ ॥
ಅದಿಕ್ಕೆ ಹೇಳ್ದ್, ಎಷ್ಟು ಮಾಡಿದರ್,
ತಿಮ್ಮಪ್ಪಂಗೆ ಪೂಜೆ, ಮಾಡಿದ ಹೊಲ್ಸ್
ನಾರದೇ ಇರ್ದುಲೇ, ಮಾಡಿದ ಪ್ರೀತಿ
ಬಯಲಾಗದೆ ಇರ್ದುಲೆತೇಳಿ, ಹಂಗಾಗಿ
ಪ್ರಿತಿ ಮಾಡಿಕೆ ಮುಂದೆ ಗ್ಯಾನ ಮಾಡಕು.

● **ಹುಲಿಮನೆ ದೇವಯ್ಯ ಹರಿಶ್‌ಕುಮಾರ್**

ಇಂದಿನ ನಿಮ್ಮ ಈ ಅವಿರತ ಸೇವೆಯು, ಫಲ ನೀಡುವ ತನಕವೂ

ಮುಂದುವರಿದು, ಜನಾಂಗದ ಶ್ರೇಯಸ್ಸು, ಅಭಿವೃದ್ಧಿ

ಬಯಸುವ ನಿಮ್ಮ "ಕೊಡಗು ಸಂಗಾತಿಗೆ"

ನಮ್ಮ ಶುಭಾಶಯಗಳು.....

ಯಿಂದ :

ಶ್ರೀ ಕೊಡಕಂಡಿರ ಯಂ. ನಂಜುಂಡ, M.A., M.Ed.

ಉಪನ್ಯಾಸಕರು, ಅರುಣಾ ಜೂನಿಯರ್ ಕಾಲೇಜು, ಚೇರಂಬಾಣೆ.

ಹಾಗೂ ಕಾಫಿ ಪ್ಲಾಂಟರ್. ಮತ್ತು

ಶ್ರೀಮತಿ ಕೊಡಕಂಡಿರ ರತ್ನ ನಂಜುಂಡ, ಬಿ.ಎಸ್ಸಿ.,

ಹಾ ಗೂ

ಕುಮಾರಿ ಅನಿತ ನಂಜುಂಡ, (ಬಿ.ಇ.)

ಕುಮಾರ ಸುದೀಪು ನಂಜುಂಡ


ವಿಳಾಸ :

ಬಿ. ಬಾಡಗ ಗ್ರಾಮ, ಚೇರಂಬಾಣೆ ಅಂಚೆ, ಮಡಿಕೇರಿ-571257.

ಉತ್ತರ ಕೊಡಗು, ದೂರವಾಣಿ - 08272/35048

Edited, Published and Owned by PATTADA. P. SHEELAMANI, Published at No. 322, Bhogadi Circle, Hinkal Post, Mysore-570017.
Printed at ASHIRWAD PRINTERS, 180/A, 6th Main, Vinayakanagar, Mysore-570012.